ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ರೂ. 20/- ಕನ್ನಡ-ಇಂಗ್ಲೀಷ್ ಮಾಸಿಕ

# ಬಾಪು ಪ್ರಪಂಚ

BAPU PRAPANCHA

ಸಂಪುಟ-04 • ಸಂಚಿಕೆ-09 • ಫೆಬ್ರವರಿ 2023

ಸರ್ವೋದಯ

ದಿನಾಚರಣೆ




## ಮತ್ತೆ ಬರುವರು ಗಾಂಧಿ...

G20 ಸ್ವಾತಂತ್ರ್ಯದ ಅಮೃತ ಮಹೋತ್ಸವ

ನವ ಭಾರತಕ್ಕಾಗಿ
ನವ ಕರ್ನಾಟಕ

## ಸಮಸ್ತ ಜನತೆಗೆ
## 74ನೇ ಗಣರಾಜ್ಯೋತ್ಸವದ
## ಶುಭಾಶಯಗಳು



"ಎಲ್ಲಿಯ ತನಕ ನೀವು ಸಾಮಾಜಿಕ ಸ್ವಾತಂತ್ರ್ಯವನ್ನು ಸಾಧಿಸುವುದಿಲ್ಲವೋ, ಅಲ್ಲಿಯ ತನಕ ಕಾನೂನು ಒದಗಿಸುವ ಯಾವುದೇ ಸ್ವಾತಂತ್ರ್ಯವನ್ನು ಪಡೆದರೂ ಅದರ ಪ್ರಯೋಜನ ಬರುವುದಿಲ್ಲ".

- ಸಂವಿಧಾನ ಶಿಲ್ಪಿ ಡಾ.ಬಿ.ಆರ್. ಅಂಬೇಡ್ಕರ್



ಶ್ರೀ ನರೇಂದ್ರ ಮೋದಿ
ಸನ್ಮಾನ್ಯ ಪ್ರಧಾನಮಂತ್ರಿಗಳು



ಶ್ರೀ ಥಾವರ್ ಚಂದ್ ಗೆಹ್ಲೋಟ್
ಸನ್ಮಾನ್ಯ ರಾಜ್ಯಪಾಲರು



ಶ್ರೀ ಬಸವರಾಜ ಎಸ್. ಬೊಮ್ಮಾಯಿ
ಸನ್ಮಾನ್ಯ ಮುಖ್ಯಮಂತ್ರಿಗಳು

# ಶಕ್ತಿಶಾಲಿ ಭಾರತಕ್ಕಾಗಿ ಸದೃಢ ಕರ್ನಾಟಕ ನಿರ್ಮಿಸಲು ಸಂಕಲ್ಪ

## ಅಭಿವೃದ್ಧಿ–ಜನ ಕಲ್ಯಾಣಕ್ಕಾಗಿ ಹಲವಾರು ವಿಶೇಷ ಯೋಜನೆಗಳ ಅನುಷ್ಠಾನ

- **ಮುಖ್ಯಮಂತ್ರಿ ರೈತ ವಿದ್ಯಾನಿಧಿ ಯೋಜನೆ: 10 ಲಕ್ಷಕ್ಕೂ** ಹೆಚ್ಚು ವಿದ್ಯಾರ್ಥಿಗಳಿಗೆ ಪ್ರಯೋಜನ. ಈವರೆಗೆ **ರೂ.483.62 ಕೋಟಿ** ಮೊತ್ತದ ವಿದ್ಯಾರ್ಥಿವೇತನ ವಿತರಣೆ
- ವಿವಿಧ ಸಾಮಾಜಿಕ ಭದ್ರತಾ ಯೋಜನೆಗಳ **ಪಿಂಚಣಿ ಮೊತ್ತದಲ್ಲಿ ಹೆಚ್ಚಳ. 75 ಲಕ್ಷಕ್ಕೂ ಹೆಚ್ಚಿನ ಜನರಿಗೆ ಪ್ರಯೋಜನ**
- **ವಸತಿ ಯೋಜನೆ:** ಮೂರು ವರ್ಷಗಳಲ್ಲಿ ಸುಮಾರು **5 ಲಕ್ಷ ಮನೆಗಳ** ನಿರ್ಮಾಣ.
- **ಆರೋಗ್ಯ: ರೂ.1,000 ಕೋಟಿ** ವೆಚ್ಚದಲ್ಲಿ **ಸಮುದಾಯ ಆರೋಗ್ಯ ಕೇಂದ್ರಗಳಾಗಿ 100** ಪ್ರಾಥಮಿಕ ಆರೋಗ್ಯ ಕೇಂದ್ರಗಳ ಉನ್ನತೀಕರಣ
- **ರಾಜ್ಯದ ವಿವಿಧೆಡೆ 438 'ನಮ್ಮ ಕ್ಲಿನಿಕ್'ಗಳ ಆರಂಭ**
- **ಯಶಸ್ವಿನಿ ಯೋಜನೆಯ ಪುನರ್ ಪ್ರಾರಂಭ**
- **ಸ್ತ್ರೀ ಸಾಮರ್ಥ್ಯ** ಯೋಜನೆಯಡಿ **33,333 ಮಹಿಳಾ ಸ್ವಸಹಾಯ ಗುಂಪುಗಳಿಗೆ ತಲಾ ರೂ.1.5 ಲಕ್ಷ ಮೂಲಧನ.** ಇದರಿಂದ **3.9 ಲಕ್ಷ ಮಹಿಳೆಯರಿಗೆ** ಸಹಾಯವಾಗಲಿದೆ.
- **ಕೊಳಚೆ** ಪ್ರದೇಶಗಳ **3.36 ಲಕ್ಷ ಕುಟುಂಬಗಳಿಗೆ ಹಕ್ಕುಪತ್ರ** ನೀಡಲು ಐತಿಹಾಸಿಕ ನಿರ್ಧಾರ. **1.14 ಲಕ್ಷ ಕುಟುಂಬಗಳಿಗೆ ಹಕ್ಕುಪತ್ರ** ನೀಡಲಾಗಿದೆ.
- **ವಿದ್ಯುನ್ಮಾನ ಆಡಳಿತ ಉಪಕ್ರಮಗಳಾದ ಗ್ರಾಮ ಒನ್, ಜನಸೇವಕ್, ಸಾರಿಗೆ ಇಲಾಖೆಯಲ್ಲಿ ಆನ್‌ಲೈನ್ ಸೇವೆ, ಇತ್ಯಾದಿ ಸೇವೆಗಳ ಆರಂಭ.**
- ಇಡೀ ದೇಶದಲ್ಲಿಯೇ **ರಾಷ್ಟ್ರೀಯ ಶಿಕ್ಷಣ ನೀತಿ 2020** ಅನ್ನು ಅನುಷ್ಠಾನ ಮಾಡಿದ ಮೊದಲ ರಾಜ್ಯ ಕರ್ನಾಟಕ.
- **15,000 ಶಾಲಾ ಶಿಕ್ಷಕರ** ನೇಮಕಾತಿ, **8,101 ಶಾಲಾ ಕೊಠಡಿಗಳ** ನಿರ್ಮಾಣ, ಎಲ್ಲಾ ಶಾಲೆಗಳಲ್ಲಿ ಶೌಚಾಲಯಗಳ ನಿರ್ಮಾಣ
- ನಗರ ಹಾಗೂ ಗ್ರಾಮೀಣ ಮಟ್ಟದಲ್ಲಿ ಮೂಲಭೂತ ಸೌಕರ್ಯಗಳನ್ನು ಉತ್ತಮಪಡಿಸುವ ಉದ್ದೇಶದಿಂದ **75ನೇ ಸ್ವಾತಂತ್ರ್ಯ ದಿನಾಚರಣೆಯ ಸ್ಮರಣೆಯಾಗಿ ಅಮೃತ್ ಯೋಜನೆಗಳಿಗೆ ಚಾಲನೆ.**

  ದುರ್ಬಲ ವರ್ಗಗಳ ಜನರನ್ನು ಮೇಲೆತ್ತುವುದು, ಸ್ವಸಹಾಯ ಗುಂಪುಗಳಿಗೆ ಮೂಲಧನ ನೀಡುವುದು, **ಎಸ್.ಸಿ./ಎಸ್.ಟಿ, ಇತರೆ** ಹಿಂದುಳಿದ ಯುವಕರ ಹಾಗೂ **ಮಹಿಳಾ ಉದ್ಯಮಿಗಳ ನವೋದ್ಯಮಗಳಿಗೆ ಪ್ರೋತ್ಸಾಹ** ನೀಡುವುದು ಸಹ ಈ ಯೋಜನೆಗಳ ಉದ್ದೇಶ
- ಹಿಂದುಳಿದ ವರ್ಗಗಳ ಕಲ್ಯಾಣ, ಸಮಾಜ ಕಲ್ಯಾಣ, ಪರಿಶಿಷ್ಟ ವರ್ಗಗಳ ಕಲ್ಯಾಣ ಹಾಗೂ ಅಲ್ಪಸಂಖ್ಯಾತರ ಕಲ್ಯಾಣಗಳ ಇಲಾಖೆಗಳಡಿ ಬರುವ **19 ವಿವಿಧ ನಿಗಮಗಳಿಗೆ ರೂ.857.75 ಕೋಟಿ ಹೆಚ್ಚುವರಿ** ಅನುದಾನ.
- ಗ್ರಾಮೀಣ ಪ್ರದೇಶಗಳಲ್ಲಿ ಕಿರು ಉದ್ಯಮಗಳಿಗೆ ಬೆಂಬಲ ನೀಡಲು **ಸ್ವಾಮಿ ವಿವೇಕಾನಂದ ಯುವಶಕ್ತಿ ಸಂಘ** ಯೋಜನೆ. **5 ಲಕ್ಷ** ಯುವಕರಿಗೆ ಪ್ರಯೋಜನದ ನಿರೀಕ್ಷೆ.
- **ಪರಿಶಿಷ್ಟ ಜಾತಿ/ವರ್ಗಗಳಿಗೆ** ಮೀಸಲಾತಿಯನ್ನು ಕ್ರಮವಾಗಿ **ಶೇ.15 ರಿಂದ ಶೇ.17ರವರೆಗೆ ಹಾಗೂ ಶೇ.3 ರಿಂದ ಶೇ.7ರವರೆಗೆ ಹೆಚ್ಚಿಸಲಾಗಿದೆ.**
- **ದಾಖಲೆ ರಹಿತ 1,475 ಜನವಸತಿಗಳನ್ನು ಕಂದಾಯ ಗ್ರಾಮಗಳಾಗಿ ಘೋಷಣೆ. ದಾಖಲೆಯ 52,000 ಜನರಿಗೆ ಹಕ್ಕುಪತ್ರ ವಿತರಣೆ**

## ಕೇಂದ್ರ ಸರ್ಕಾರದ ಯೋಜನೆಗಳ ಯಶಸ್ವಿ ಅನುಷ್ಠಾನ

- **ಪಿಎಂ–ಕಿಸಾನ್ ಯೋಜನೆಯಡಿ** ರಾಜ್ಯದ **53.83 ಲಕ್ಷ ರೈತರಿಗೆ** ಪ್ರಯೋಜನ. ಈವರೆಗೆ ಕೇಂದ್ರದಿಂದ **ರೂ.9,982.15 ಕೋಟಿ** ವಿತರಣೆ.
- ಪ್ರಧಾನಮಂತ್ರಿ ಉಜ್ವಲ ಯೋಜನೆಯಿಂದ **34.66 ಲಕ್ಷ** ಕುಟುಂಬಗಳಿಗೆ ಪ್ರಯೋಜನ.
- ಪಿಎಂ ಸ್ವನಿಧಿ ಯೋಜನೆಯಡಿ **2.39 ಲಕ್ಷ** ಬೀದಿ ವ್ಯಾಪಾರಿಗಳಿಗೆ ಸಾಲ ಮಂಜೂರು.
- ಪ್ರಧಾನಮಂತ್ರಿ ಗರೀಬ್ ಕಲ್ಯಾಣ ಅನ್ನ ಯೋಜನೆಯಡಿ ರಾಜ್ಯದ **4.50 ಲಕ್ಷ ಫಲಾನುಭವಿಗಳಿಗೆ** ಪ್ರಯೋಜನ.
- ಜಲಜೀವನ್ ಮಿಷನ್ ಅಡಿ **6.51 ಲಕ್ಷ** ಗ್ರಾಮೀಣ ಮನೆಗಳಿಗೆ ನಳ ಸಂಪರ್ಕ.
- **ಬೆಟ್ಟಕುರುಬ ಸಮುದಾಯವನ್ನು ಪರಿಶಿಷ್ಟ ವರ್ಗಗಳಡಿ ಭಾರತ ಸರ್ಕಾರ ಸೇರಿಸಿದೆ.**

## ದೆಹಲಿಯ ಗಣರಾಜ್ಯೋತ್ಸವ ಪರೇಡ್‌ನಲ್ಲಿ ರಾಜ್ಯದಿಂದ ಪಾಲ್ಗೊಳ್ಳುತ್ತಿರುವ 'ನಾರಿ ಶಕ್ತಿ' ವಿಷಯಾಧಾರಿತ ಸ್ತಬ್ಧ ಚಿತ್ರ




## ಹೂಡಿಕೆಯಲ್ಲಿ ರಾಜ್ಯ ದೇಶದಲ್ಲೇ ಅಗ್ರಸ್ಥಾನದಲ್ಲಿ

- **2022ರಲ್ಲಿ ದಾವೋಸ್‌ನಲ್ಲಿ ನಡೆದ ವಿಶ್ವ ಆರ್ಥಿಕ ವೇದಿಕೆ ಸಭೆಯಲ್ಲಿ ರೂ.52,000 ಕೋಟಿ ಮೊತ್ತದ ಬಂಡವಾಳ ಹೂಡಿಕೆ ಒಪ್ಪಂದಗಳಿಗೆ ಸಹಿ.**
- **2022ರ ನವೆಂಬರ್‌ನಲ್ಲಿ ರಾಜ್ಯದಲ್ಲಿ ನಡೆದ ಜಾಗತಿಕ ಹೂಡಿಕೆದಾರರ ಸಮಾವೇಶದಲ್ಲಿ ರೂ.9.8 ಲಕ್ಷ ಕೋಟಿ ಮೊತ್ತದ ಹೂಡಿಕೆ ಒಪ್ಪಂದಗಳಿಗೆ ಸಹಿ. ಇದರಿಂದ 6 ಲಕ್ಷ ಉದ್ಯೋಗ ಅವಕಾಶಗಳ ಸೃಷ್ಟಿ. ಈ ಬಂಡವಾಳ ಹೂಡಿಕೆಯ ಶೇ. 90ರಷ್ಟು ಭಾಗ ಬೆಂಗಳೂರಿಂದ ಹೊರಗೆ ರಾಜ್ಯದ ವಿವಿಧೆಡೆಗಳಲ್ಲಿ ಹೂಡಿಕೆಯಾಗುತ್ತದೆ.**
- **ನೀತಿ ಆಯೋಗದ ಇಂಡಿಯಾ ಇನ್ನೋವೇಷನ್ ಇಂಡೆಕ್ಸ್, 2022ರಲ್ಲಿ ಕರ್ನಾಟಕ ಮೊದಲ ಸ್ಥಾನ ಗಳಿಸಿದೆ.**

## ಮೂಲಭೂತ ಸೌಕರ್ಯ

- **ಮೈಸೂರು–ಬೆಂಗಳೂರು–ಚೆನ್ನೈಗೆ ತ್ವರಿತ ಸಂಪರ್ಕ ಕಲ್ಪಿಸುವ ವಂದೇ ಭಾರತ್ ಎಕ್ಸ್‌ಪ್ರೆಸ್ ರೈಲಿಗೆ ಚಾಲನೆ**
- **ಮೈಸೂರು ವಿಮಾನ ನಿಲ್ದಾಣದ ವಿಸ್ತರಣೆ, ಹಾಸನ ವಿಮಾನ ನಿಲ್ದಾಣದ ಕಾಮಗಾರಿಗಳು ಪ್ರಗತಿಯಲ್ಲಿ, ಶಿವಮೊಗ್ಗ ವಿಮಾನ ನಿಲ್ದಾಣ ಕಾಮಗಾರಿಗಳು ಮುಕ್ತಾಯದ ಹಂತದಲ್ಲಿ**
- **ಮೈಸೂರಿನ ನಾಗನಹಳ್ಳಿಯಲ್ಲಿ ಹೊಸ ಕೋಚಿಂಗ್ ಕಾಂಪ್ಲೆಕ್ಸ್, ಇದರಿಂದ ಕಡಿಮೆ ದೂರದ ರೈಲುಗಳನ್ನು ಆರಂಭಿಸಲು ಅನುಕೂಲ.**
- **ರೂ.2 ಲಕ್ಷ ಕೋಟಿ ವೆಚ್ಚದಲ್ಲಿ ವಿವಿಧ ರಾಷ್ಟ್ರೀಯ ಹೆದ್ದಾರಿಗಳ ಅಭಿವೃದ್ಧಿ**

"ನಮ್ಮ ವೈವಿಧ್ಯಮಯ ಸಂಸ್ಕೃತಿ ಮತ್ತು ಪರಂಪರೆಯನ್ನು ಗೌರವಿಸುವುದು ಮತ್ತು ಕಾಪಾಡುವುದು." - ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ



ಕರ್ನಾಟಕ ಗಾಂಧಿ
ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಇಂದಿರಾ ಕೃಷ್ಣಪ್ಪ**

Editor :
**Indira Krishnappa**

ಪ್ರಕಾಶಕರು :
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**CreativeGeekZ**
Yadhava College Road,
Madhavanagara, Bengaluru - 560001
Ph : +91 80 40927049
E-mail : mail@creativegeekz.com



**ಲೇಖನಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಲೇಖಕರವು**
**ಬಾಪು ಪ್ರಪಂಚದಲ್ಲಿನ ಚಿತ್ರಗಳು ಸಾಂದರ್ಭಿಕವಾಗಿರುತ್ತದೆ**



Design : **Ujwal Creations**, Bangalore



ರೂ. 20/– **BAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–04 • ಸಂಚಿಕೆ–9 • ಫೆಬ್ರವರಿ 2023




ಫೋಟೋಗಳು : ಬಾಲಾಜಿ ಶರ್ಮ



# ಮಹಾತ್ಮ ಗಾಂಧಿಯವರ

# ಅಂತಿಮ ದಿನ

**1948, ಜನವರಿ 30**. ಬೆಳಗಿನ ಜಾವ 3.30 ಘಂಟೆ. ದಿಲ್ಲಿಯಲ್ಲಿ ಮೈ ಕೊರೆಯುವ ಚಳಿಗಾಲ. ನವದೆಹಲಿಯ ಬಿರ್ಲಾ ಭವನದಲ್ಲಿ ಪ್ರಶಾಂತ ವಾತಾವರಣ. 78 ರ ಇಳಿವಯಸ್ಸಿನ ಗಾಂಧೀಜಿ ಎಂದಿನಂತೆ ಬೆಳಿಗ್ಗೆ ಬೇಗ ಎದ್ದರು. ಪಕ್ಕದಲ್ಲಿಯೇ ಮಲಗಿದ್ದ ಹಿರಿಯ ಮೊಮ್ಮಗಳು ಅಭಾಳಿಗೆ ಎದ್ದೇಳುವಂತೆ ಹೇಳಿ ತಾವು ಶೌಚಕ್ಕೆ ತೆರಳಿದರು. ಶೌಚ ಮುಗಿಸಿ ಬಂದು ಚಾಪೆಯ ಮೇಲೆ ಕುಳಿತು ಸ್ವಲ್ಪ ಹೊತ್ತು ಧ್ಯಾನಾಸಕ್ತರಾದರು. ಗಾಂಧಿಯ ಇನ್ನೊಬ್ಬ ಕಿರಿಯ ಮೊಮ್ಮಗಳು ಮನುಗಾಂಧಿ ಬೆಳಗಿನ ಜಾವದ ಪ್ರಾರ್ಥನೆಗೆ ಸಿದ್ಧ ಮಾಡಿದರು. ಗಾಂಧೀಜಿ ತಮ್ಮ ಆಪ್ತ ಬಳಗದ ಜೊತೆ ಕುಳಿತು ವಿವಿಧ ಧರ್ಮಗಳಿಂದ ಆಯ್ದ ಕೆಲವು ಪ್ರಾರ್ಥನೆಗಳನ್ನು ಹಾಡಿದರು.

ಪ್ರಾರ್ಥನೆ ಮುಗಿದ ನಂತರ ಬಿಸಿ ನೀರಿಗೆ ತುಸು ಜೇನುತುಪ್ಪ, ನಿಂಬೆ ರಸ ಬೆರಸಿ ಮನು ನೀಡಿದ ಪಾನೀಯವನ್ನು ಗಾಂಧೀಜಿ ಕುಡಿದರು. ಅವತ್ತಿನ ಬೆಳಗಿನ ಪ್ರಾರ್ಥನೆಗೆ ಅಭಾಗಾಂಧಿ ಬಾರದಿದ್ದನ್ನು ಗಮನಿಸಿದ್ದ ಗಾಂಧೀಜಿ ಗುಜರಾತಿ ಭಾಷೆಯಲ್ಲಿ " **ಪ್ರಾರ್ಥನೆ ಎನ್ನುವುದು ನಮ್ಮ ಆತ್ಮವನ್ನು ಸ್ವಚ್ಛಗೊಳಿಸುವ ಕಸಬರಿಕೆ. ಇಂಥ ಮಹತ್ವವುಳ್ಳ ಪ್ರಾರ್ಥನೆಗೆ ಅಭಾ ತಪ್ಪಿಸಿಕೊಳ್ಳುವುದು ನನಗೆ ನೋವು ತರುತ್ತಿದೆ. ಪ್ರಾರ್ಥನೆಗೆ ಬರುವುದು ಆಕೆಗೆ ಇಷ್ಟವಿಲ್ಲದಿದ್ದರೆ ಆಭಾ ನನ್ನನ್ನು ಬಿಟ್ಟು ಹೋಗಬಹುದು. ಇದು ನಮ್ಮಿಬ್ಬರಿಗೂ ಒಳ್ಳೆಯದು** " ಎಂದು ಮನುಗೆ ಮೇಲು ದನಿಯಲ್ಲಿ ಹೇಳಿದರು. ಅಭಾಳ ಈ ವರ್ತನೆ ಬಗ್ಗೆ ಗಾಂಧೀಜಿಗೆ ಬೇಸರ ತರಿಸಿತ್ತು. ಆದರೂ ಅವರು ಈ ವಿಷಯವನ್ನು ನೇರವಾಗಿ ಆಕೆಯ ಬಳಿ ಪ್ರಸ್ತಾಪಿಸದೆ

ತಮ್ಮ ಅಸಹನೆಯನ್ನು ಮೊಮ್ಮಗಳು ಮನು ಮೂಲಕ ಆಭಾಗೆ ಸೂಕ್ಷ್ಮವಾಗಿ ತಲುಪಿಸಿದ್ದರು. ತಾವು ನಂಬಿದ ಮೌಲ್ಯಗಳ ಬಗ್ಗೆ ತಮ್ಮ ಆಪ್ತ ಬಳಗವೂ ನಂಬಿಕೆ ಇಟ್ಟು ಕೊಳ್ಳಬೇಕು ಎನ್ನುವುದು ಗಾಂಧೀಜಿಯವರ ಆಶಯವಾಗಿತ್ತು.

ಈ ದಿನಗಳಲ್ಲಿ ದೆಹಲಿಯಲ್ಲಿ ಹಿಂದೂ ಮುಸ್ಲಿಂರ ನಡುವಿನ ಕೋಮು ಗಲಭೆಗಳು ಉಲ್ಬಣಗೊಂಡಿದ್ದವು. ಮುಸ್ಲಿಮರಿಂದ ಹಲ್ಲೆಗೆ ಒಳಗಾಗಿ ಪಾಕಿಸ್ತಾನದಿಂದ ನೂರಾರು ಹಿಂದೂ ನಿರಾಶ್ರಿತರು ದೆಹಲಿಗೆ ಆಶ್ರಯಕ್ಕಾಗಿ ಬರುತ್ತಿದ್ದರು. ಇದನ್ನು ಕಂಡು ದೆಹಲಿಯ ಹಿಂದೂಗಳು ರೊಚ್ಚಿಗೆದ್ದು ದೆಹಲಿಯ ಮುಸ್ಲಿಮರ ಮೇಲೆ ಹಲ್ಲೆ ನಡೆಸುತ್ತಿದ್ದರು. ಈ ಕೋಮು ಗಲಭೆಗಳಿಂದ ಗಾಂಧೀಜಿಯವರ ಮನಸ್ಸು ದುಗುಡದಲ್ಲಿತ್ತು. ಭಾರತಕ್ಕೆ ತಾವು ಬಯಸಿದ ರೀತಿಯಲ್ಲಿ ಸ್ವಾತಂತ್ರ್ಯ ಸಿಗಲಿಲ್ಲ ಎನ್ನುವ ಖಿನ್ನತೆ ಕೂಡಾ ಅವರನ್ನು ಕಾಡುತ್ತಿತ್ತು. ಕೋಲ್ಕತ್ತಾದಲ್ಲಿ ನಡೆದಿದ್ದ ಹಿಂದೂ ಮುಸ್ಲಿಂರ ಕೋಮು ಗಲಭೆಯನ್ನು ತಹಬಂದಿಗೆ ತಂದ ನಂತರ ಸೆಪ್ಟೆಂಬರ್ 9 ರಂದು ಗಾಂಧೀಜಿ ಕೊಲ್ಕೊತ್ತದಿಂದ ದೆಹಲಿಗೆ ಬಂದಿದ್ದರು.

ಗಾಂಧೀಜಿಯವರ ಆರೋಗ್ಯ ಮತ್ತು ಸುರಕ್ಷತೆ ಸರ್ಕಾರಕ್ಕೆ ಮಹತ್ವದ ವಿಷಯವಾಗಿತ್ತು. ಹೀಗಾಗಿ ಪ್ರಧಾನಿ ನೆಹರು ಮತ್ತು ಗೃಹಸಚಿವ ಪಟೇಲ್ ಅವರ ನಿವಾಸಗಳಿಗೆ ಸನಿಹದಲ್ಲೇ ಆಲ್ಬುರ್ಕರ್ಕ್ ರಸ್ತೆಯಲ್ಲಿದ್ದ ಉದ್ಯಮಿ ಬಿರ್ಲಾ ಅವರಿಗೆ ಸೇರಿದ್ದ ಬಿರ್ಲಾ ಭವನದಲ್ಲಿ ಗಾಂಧೀಜಿಯವರನ್ನು ಸರ್ಕಾರ ಇರಿಸಿತ್ತು. ತಮ್ಮ ಬದುಕಿನ ಅಂತಿಮ 144 ದಿನಗಳನ್ನು ಗಾಂಧೀಜಿ ಈ ಬಿರ್ಲಾ ಭವನದಲ್ಲಿಯೇ ಕಳೆದರು.

ಜನವರಿ 30 ರಂದು ಬೆಳಿಗ್ಗೆ 6 ಘಂಟೆಗೆ ಶ್ರೀಮತಿ ಆರ್ ಕೆ ನೆಹರು ಅವರು ಗಾಂಧೀಜಿಯವರನ್ನು ಭೇಟಿ ಮಾಡಲು ಬಂದಿದ್ದರು. ಅಂದು ಮಧ್ಯಾಹ್ನವೇ ಅಮೆರಿಕಾ ಪ್ರವಾಸಕ್ಕೆ ತೆರಳುತ್ತಿದ್ದ ಅವರಿಗೆ ಗಾಂಧೀಜಿ "**ಬಡ ರಾಷ್ಟ್ರದ ಪ್ರತಿನಿಧಿಯಾಗಿ ಅಲ್ಲಿಗೆ ತೆರಳುತ್ತಿರುವ ನೀನು ಅಮೇರಿಕಾದಲ್ಲಿ ಸರಳತೆಯ ಜೀವನ ಮತ್ತು ನಡತೆಯನ್ನು ಪ್ರದರ್ಶಿಸ ಬೇಕು** " ಎಂದು ಹಿತವಚನ ಹೇಳಿ ಸಹಿ ಮಾಡಿದ ತಮ್ಮ ಭಾವಚಿತ್ರವನ್ನು ಆಕೆಗೆ ನೀಡಿ ಬೀಳ್ಕೊಟ್ಟರು. ನಿತ್ಯದಂತೆ ಗಾಂಧೀಜಿಯವರ ಆಪ್ತ ಸಹಾಯಕರು ಗಾಂಧಿಯವರಿಗೆ ಅರ್ಧ ಗಂಟೆ ದೇಹದ ಮಸಾಜ್ ಮಾಡಿದರು. ತುಸು ಹೊತ್ತಿನ ನಂತರ ಮನು ತನ್ನಜ್ಜ ಗಾಂಧೀಜಿಗೆ ಸ್ನಾನ ಮಾಡಿಸಿದರು. ಗಾಂಧೀಜಿಯವರ ಅಂತಿಮ ದಿನಗಳಲ್ಲಿ ಅವರ ಮೊಮ್ಮಕ್ಕಳಾದ ಆಭಾ ಮತ್ತು ಮನು ಅವರ ಪಾತ್ರ ಬಹಳ ಪ್ರಮುಖವಾಗಿತ್ತು. ಗಾಂಧೀಜಿಯ ಎಲ್ಲ ದೈಹಿಕ ಚಟುವಟಿಕೆಗಳಿಗೆ ಅವರಿಬ್ಬರೇ ಆಸರೆಯಾಗಿದ್ದರು . ಸ್ನಾನ ಮುಗಿಸಿ ಬಂದ ನಂತರ ಗಾಂಧಿ ತುಸು ಗೆಲುವಾಗಿದ್ದರು. ಮನು ಅವರನ್ನು ತೂಕದ ಯಂತ್ರದ ಮೇಲೆ ನಿಲ್ಲಿಸಿ ನೋಡಿದರು. ಗಾಂಧೀಜಿಯ ತೂಕದಲ್ಲಿ ಸ್ವಲ್ಪ ಏರಿಕೆಯಾಗಿತ್ತು. ಐದು ದಿನಗಳ ಉಪವಾಸ ಸತ್ಯಾಗ್ರಹದಲ್ಲಿ ಕಳೆದುಕೊಂಡಿದ್ದ ತೂಕದಲ್ಲಿ ಒಂದು ಕೆಜಿ ಹೆಚ್ಚು ತೂಕ ಗಳಿಸಿ ಅವರು 49 ಕೆಜಿ ತೂಗಿದರು. ಇದರಿಂದ ಮನುಗೆ ಸ್ವಲ್ಪ ಖುಶಿಯಾಯಿತು. ಗಾಂಧೀಜಿ ಬೆಳಿಗ್ಗೆ 9.30ಕ್ಕೆ ಉಪಹಾರ ಸೇವನೆಗೆ ಕುಳಿತರು. ವೈದ್ಯರ ಸಲಹೆ ಮೇರೆಗೆ ಗಾಂಧೀಜಿಯವರಿಗೆ ಬೇಯಿಸಿದ ತರಕಾರಿ, ಮೇಕೆ ಹಾಲು, ಟೊಮ್ಯಾಟೋ, ಕಿತ್ತಳೆ ಹಣ್ಣಿನ ರಸ, ಕ್ಯಾರೆಟ್ ರಸ ಇವೆಲ್ಲವನ್ನೂ ನೀಡಲಾಗುತ್ತಿತ್ತು.

ಬೆಳಿಗ್ಗೆ ಹೊತ್ತು ಏರುತ್ತಿದ್ದಂತೆ ಬಿರ್ಲಾ ಭವನದಲ್ಲಿ ಚಟುವಟಿಕೆಗಳು ಚುರುಕಾದವು. ಜನಸಾಮಾನ್ಯರು, ರಾಜಕೀಯ ನಾಯಕರು, ಧಾರ್ಮಿಕ ಮುಖಂಡರು, ಪತ್ರಕರ್ತರು ಗಾಂಧಿಯವರ ಭೇಟಿಗಾಗಿ ಬರತೊಡಗಿದರು. ಗಾಂಧಿಯವರ ಆಪ್ತ ಸಿಬ್ಬಂದಿಗಳು ಈ ರೀತಿ ಭೇಟಿಗೆ ಬರುತ್ತಿದ್ದವರನ್ನು ಕೂರಿಸಿ ಭೇಟಿಗೆ ವ್ಯವಸ್ಥೆ ಮಾಡುತ್ತಿದ್ದರು.





ನಂತರ ಗಾಂಧೀಜಿ ಬಿರ್ಲಾ ಭವನದ ಹುಲ್ಲು ಹಾಸಿನ ಮೇಲೆ ಚಾರ್ಪಾಯ್ ಹಾಕಿಕೊಂಡು ತುಸು ಬಿಸಿಲು ಕಾಯಿಸಿಕೊಂಡರು. ಮಧ್ಯಾಹ್ನ 12.30 ಕ್ಕೆ ಕೆಲವು ಮುಸ್ಲಿಂ ಮುಖಂಡರು ಗಾಂಧೀಜಿಯವರನ್ನು ಭೇಟಿಯಾದರು. ದೆಹಲಿ ಗಲಭೆಗಳನ್ನು ನಿಯಂತ್ರಿಸಲು ನಾವು ಎಲ್ಲ ರೀತಿಯ ಸಹಕಾರ ನೀಡುತ್ತೇವೆ. ಆ ಬಗ್ಗೆ ತಾವು ಮತ್ತೆ ಮತ್ತೆ ಚಿಂತಿಸುವ ಅಗತ್ಯವಿಲ್ಲ ಎನ್ನುವ ಭರವಸೆಯನ್ನು ಅವರು ಗಾಂಧೀಜಿಗೆ ನೀಡಿದರು. ತಾವು ಫೆಬ್ರವರಿ 2 ರಂದು ವಾರ್ಧಾ ಆಶ್ರಮಕ್ಕೆ ತೆರಳುತ್ತಿದ್ದು ಮತ್ತೆ ಫೆಬ್ರವರಿ 14 ಕ್ಕೆ ವಾಪಸ್ ಬರುತ್ತೇನೆ. ಅದಕ್ಕೆ ನಿಮ್ಮ ಅನುಮತಿ ಅಗತ್ಯ ಎಂದು ಮುಸ್ಲಿಂ ಮುಖಂಡರಿಗೆ ತಿಳಿಸಿ ಅವರ ಸಮ್ಮತಿ ಪಡೆದುಕೊಂಡರು.

ಅಂದು ಮಧ್ಯಾಹ್ನ 2 ಘಂಟೆ ಸುಮಾರಿಗೆ ಅಮೇರಿಕಾದ ಲೈಫ್ ನಿಯತಕಾಲಿಕದ ಖ್ಯಾತ ಛಾಯಾಗ್ರಾಹಕಿ ಪತ್ರಕರ್ತೆ ಮಾರ್ಗರೇಟ್ ಬರ್ಕ್ ವೈಟ್ ಮತ್ತೊಮ್ಮೆ ಗಾಂಧೀಜಿಯ ಸಂದರ್ಶನಕ್ಕೆ ಬಂದಿದ್ದರು. ಸಂದರ್ಶನದ ನಡುವೆ ಆಕೆ " **ಗಾಂಧೀಜಿ ಹಿಂದೊಮ್ಮೆ ನೀವು 125 ವರ್ಷ ಬದುಕಬೇಕೆಂದು ಹೇಳಿದ್ದಿರಿ. ಆ ನಂಬಿಕೆ ನಿಮಗೆ ಹೇಗೆ ಬಂತು** ? " ಎಂದು ಕೇಳಿದರು. ಈ ಪ್ರಶ್ನೆಗೆ ಗಾಂಧೀಜಿಯ ಉತ್ತರ ಆಕೆಯನ್ನು ಚಕಿತಗೊಳಿಸಿತು. ಗಾಂಧೀಜಿಯವರು "**ನನಗೀಗ ಆ ಆಸೆ ಉಳಿದಿಲ್ಲ. ಜಗತ್ತಿನಲ್ಲಿ ಇತ್ತೀಚಿಗೆ ನಡೆಯುತ್ತಿರುವ ಘಟನೆಗಳನ್ನು ನೋಡಿದರೆ ನಾನು ಈ ಕತ್ತಲೆಯಲ್ಲಿ ಬಹಳ ಕಾಲ ಬದುಕಲು ಇಚ್ಛಿಸುವುದಿಲ್ಲ**" ಎಂದು ಉತ್ತರಿಸಿದ್ದರು. ಗಾಂಧೀಜಿ ತಮ್ಮ ಅಂತಿಮ ದಿನಗಳಲ್ಲಿ, ಈ ರೀತಿ ಹೆಚ್ಚು ಕಾಲ ಬದುಕುವ ಆಸೆ ತನಗಿಲ್ಲ ಎನ್ನುವ ತಮ್ಮ ಮನೋ ಇಂಗಿತವನ್ನು ಹಲವಾರು ವೇದಿಕೆಗಳಲ್ಲಿ ಮತ್ತು ತಮ್ಮ ಪ್ರಾರ್ಥನಾ ಸಭೆಗಳಲ್ಲಿ ಪದೇ ಪದೇ ಹೇಳುತ್ತಲೇ ಇದ್ದರು.

ಕೇವಲ ಹತ್ತು ದಿನಗಳ ಹಿಂದಷ್ಟೇ ಜನವರಿ 20 ರಂದು ಪ್ರಾರ್ಥನಾ ಸಭೆಯಲ್ಲಿ ಬಾಂಬ್ ಎಸೆಯುವ ಮೂಲಕ ಗಾಂಧೀಜಿಯವರನ್ನು ಹತ್ಯೆ ಮಾಡುವ ವಿಫಲ ಪ್ರಯತ್ನವೂ ನಡೆದಿತ್ತು. ಮದನಲಾಲ್ ಎನ್ನುವ ಪಂಜಾಬ್ ನಿರಾಶ್ರಿತ ಗಾಂಧೀಜಿಯ ಕಡೆಗೆ ಕೈಬಾಂಬ್ ಎಸೆದಿದ್ದ. ಅದು ಗೋಡೆಗೆ ತಗುಲಿ ಗೋಡೆ ಬಿರುಕು ಬಿಟ್ಟಿತ್ತು. ಈ

ದೆಹಲಿಯಲ್ಲಿನ ಹಿಂದೂ ಮುಸ್ಲಿಂ ಕೋಮು ಗಲಭೆಗಳಿಂದ ಕಂಗೆಟ್ಟಿದ್ದ ಗಾಂಧೀಜಿ ಜನಸಾಮಾನ್ಯರ ಭೇಟಿ ಮತ್ತು ಪ್ರಾರ್ಥನಾ ಸಭೆಗಳ ಮೂಲಕ ತಮ್ಮ ಮನಸ್ಸಿನ ದುಗುಡ ಕಡಿಮೆ ಮಾಡಿಕೊಳ್ಳಲು ಬಯಸುತ್ತಿದ್ದರು. ಹೀಗಾಗಿ ದಿನನಿತ್ಯ ಅವರ ಭೇಟಿಗಾಗಿ ಬರುವವರ ಸಂಖ್ಯೆ ಸಹಜವಾಗಿಯೇ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿತ್ತು.

ಗಾಂಧೀಜಿಯವರ ಅಂತಿಮ ದಿನಗಳಲ್ಲಿ ಅವರ ಬಳಿ ಇಬ್ಬರು ಆಪ್ತ ಕಾರ್ಯದರ್ಶಿಗಳಿದ್ದರು. ಒಬ್ಬರು ಅವರ ಹಿರಿಯ ಅತ್ಯಾಪ್ತ ಕಾರ್ಯದರ್ಶಿ ಪ್ಯಾರೇಲಾಲ್ ನಯ್ಯರ್. ಇನ್ನೊಬ್ಬರು ಕಿರಿಯ ಆಪ್ತ ಕಾರ್ಯದರ್ಶಿ ವಿ ಕಲ್ಯಾಣಂ. ಅತಿ ಗಹನವಾದ ಪ್ರಾಮುಖ್ಯದ ರಾಜಕೀಯ ವಿಷಯಗಳನ್ನು ಪ್ಯಾರೇಲಾಲ್ ನಯ್ಯರ್ ನಿರ್ವಹಿಸುತ್ತಿದ್ದರು. ಗಾಂಧೀಜಿಯವರ ಸಂದರ್ಶಕರ ಭೇಟಿ ನಿಗದಿಗೊಳಿಸುವುದು, ಪ್ರವಾಸ ಕಾರ್ಯಕ್ರಮ ಸಿದ್ಧಪಡಿಸುವುದು, ಕರಡು ಟಿಪ್ಪಣಿಗಳ ಬೆರಳಚ್ಚು ಮಾಡುವುದು ಹಾಗೂ ಇತರೆ ಕಾರ್ಯಗಳನ್ನು ವಿ. ಕಲ್ಯಾಣಂ ನಿರ್ವಹಿಸುತ್ತಿದ್ದರು.

ಉಪಹಾರದ ನಂತರ ಗಾಂಧೀಜಿಯವರೊಡನೆ ಅವರ ಆಪ್ತ ಸಿಬ್ಬಂದಿಯ ಸಮಾಲೋಚನೆ ಶುರುವಾಗಿತ್ತು. ಕಾಂಗ್ರೆಸ್ ಪಕ್ಷವನ್ನು ವಿಸರ್ಜಿಸಲು ಗಂಭೀರವಾಗಿ ಚಿಂತಿಸುತ್ತಿದ್ದ ಗಾಂಧೀಜಿ ಅದಕ್ಕಾಗಿ ಹಿಂದಿನ ದಿನ ಚರ್ಚಿಸಿ ಒಂದು ಕರಡನ್ನು ಸಿದ್ದಪಡಿಸಿದ್ದರು. ಗ್ರಾಮೀಣ ಏಳಿಗೆಗೆ ಪೂರ್ಣವಾಗಿ ಶ್ರಮಿಸುವ **'ಲೋಕ ಸೇವಕ ಸಂಘ'** ಎನ್ನುವ ಹೆಸರಿನ ಹೊಸ ಸಂಘಟನೆಯನ್ನು ಸ್ಥಾಪಿಸುವ ಬಗ್ಗೆ ಜನವರಿ 29 ರಂದು ತಯಾರಿಸಿದ್ದ ಆ ಕರಡು ಟಿಪ್ಪಣಿಯ ಮೇಲೆ ಕಣ್ಣಾಡಿಸಿದರು. ನಂತರ ಅದನ್ನು ತಮ್ಮ ಆಪ್ತ ಕಾರ್ಯದರ್ಶಿ ಪ್ಯಾರೇಲಾಲ್ ನಯ್ಯರ್ ಅವರಿಗೆ ನೀಡಿ ಕರಡನ್ನು ಮತ್ತೊಮ್ಮೆ ವಿವರವಾಗಿ ಓದಿ ತಪ್ಪು ಒಪ್ಪುಗಳನ್ನು ಗಮನಿಸಿ ಶುದ್ಧ ಕರಡನ್ನು ಸಂಜೆಗೆ ನೀಡಬೇಕೆಂದು ಗಾಂಧೀಜಿ ಸೂಚನೆ ನೀಡಿದರು. ಹಾಗೆಯೇ ಫೆಬ್ರವರಿ 2 ರಿಂದ ವಾರ್ಧಾದಲ್ಲಿನ ತಮ್ಮ ಹಳೆಯ ಆಶ್ರಮ ಸೇವಾಗ್ರಾಮಕ್ಕೆ ಭೇಟಿ ನೀಡುವ ಬಗ್ಗೆ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳ ಬೇಕೆಂದು ಕಲ್ಯಾಣಂ ಅವರಿಗೆ ಸೂಚಿಸಿದರು.

ಕೇವಲ ಹದಿನೈದು ದಿನಗಳ ಹಿಂದಷ್ಟೇ ದೆಹಲಿಯ ಕೋಮು ಗಲಭೆ ನಿಯಂತ್ರಿಸಲು ಒತ್ತಾಯಿಸಿ ಐದು ದಿನಗಳ ಕಾಲ ಉಪವಾಸ ಕೈಗೊಂಡು ನಿತ್ರಾಣಗೊಂಡಿದ್ದ ಗಾಂಧೀಜಿಯವರ ದೇಹ ಈಗ ಹೆಚ್ಚು ವಿಶ್ರಾಂತಿ ಬಯಸುತ್ತಿತ್ತು. ಕೊಂಚ ವಿಶ್ರಾಂತಿಯ

ಘಟನೆಯಿಂದ ಗಾಂಧೀಜಿ ಸ್ವಲ್ಪವೂ ವಿಚಲಿತರಾಗಿರಲಿಲ್ಲ. ಈ ಘಟನೆಯ ನಂತರ ಗೃಹ ಸಚಿವ ಪಟೇಲ್ ಅವರ ಸೂಚನೆಯ ಮೇರೆಗೆ ಹಿರಿಯ ಪೊಲೀಸ್ ಅಧಿಕಾರಿಗಳು ಪೊಲೀಸ್ ರಕ್ಷಣೆ ನೀಡುವ ಬಗ್ಗೆ ಗಾಂಧೀಜಿಯ ಬಳಿ ಚರ್ಚಿಸಲು ಬಂದಾಗ "**ನನ್ನ ಜೀವನ ದೇವರ ಕೈಯಲ್ಲಿದೆ. ನಾನು ಸಾಯಲೇ ಬೇಕೆಂದು ದೈವ ನಿರ್ಧಾರಿತವಾಗಿದ್ದರೆ ನಿಮ್ಮ ಯಾವ ಮುಂಜಾಗ್ರತಾ ರಕ್ಷಣಾ ಕ್ರಮಗಳೂ ನನ್ನನ್ನು ಉಳಿಸಲಾರವು. ನನ್ನ ಸ್ವಾತಂತ್ರವನ್ನು ಹರಣ ಮಾಡಿಕೊಂಡು ನಾನು ಜೀವ ರಕ್ಷಣೆ ಬಯಸುವುದಿಲ್ಲ** " ಎಂದೇ ಕಟುವಾಗಿ ಉತ್ತರಿಸಿದ್ದರು. ಆದರೂ ಬಿರ್ಲಾ ಭವನದಲ್ಲಿ ಅನುಮಾನಾಸ್ಪದ ವ್ಯಕ್ತಿಗಳ ಮೇಲೆ ಕಣ್ಣಿಡುವಂತೆ ಮಫ್ತಿಯಲ್ಲಿರುತ್ತಿದ್ದ ಪೊಲೀಸರಿಗೆ ಗೃಹ ಇಲಾಖೆ ಸೂಚನೆ ನೀಡಿತ್ತು.

ಇಂಥ ವಿಷಮಯ ಪರಿಸ್ಥಿತಿಯಲ್ಲಿ ಗಾಂಧೀಜಿ ತಮ್ಮ ಅಂತಿಮ ದಿನಗಳನ್ನು ಕಳೆಯುತ್ತಿದ್ದರು. ಜನವರಿ 30 ರ ಸಂಜೆ ನಾಲ್ಕು ಘಂಟೆಗೆ ಗೃಹ ಸಚಿವ ಪಟೇಲ್ ಅವರ ಭೇಟಿ ನಿಗದಿಯಾಗಿತ್ತು. ಸರ್ದಾರ್ ಪಟೇಲ್ ಸಮಯಕ್ಕೆ ಸರಿಯಾಗಿ ತಮ್ಮ ಮಗಳು ಮನುಬೆನ್ ಪಟೇಲ್ ಜೊತೆಗೂಡಿ ಗಾಂಧೀಜಿಯವರ ಭೇಟಿಗೆ ಬಂದರು. ಮಾಧ್ಯಮಗಳಲ್ಲಿ ಪದೇ ಪದೇ ಪ್ರಸ್ತಾಪವಾಗುತ್ತಿದ್ದ ನೆಹರೂ ಮತ್ತು ಪಟೇಲ್ ನಡುವಿನ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಉತ್ಸುಕರಾಗಿದ್ದ ಗಾಂಧೀಜಿ ಪಟೇಲರ ಜೊತೆ ಈ ಬಗ್ಗೆ ಅಂದು ಗಹನ ಚರ್ಚೆ ನಡೆಸಲಿದ್ದಾರೆ ಎನ್ನುವ ಗುಸು ಗುಸು ಸುದ್ದಿ ಹಬ್ಬಿತ್ತು. ಗಾಂಧೀಜಿ ಚರಕ ನೂಲುತ್ತಲೇ ಪಟೇಲರ ಜೊತೆ ಚರ್ಚೆ ನಡೆಸುತ್ತಿದ್ದರು. ಚರ್ಚೆ ಶುರುವಾಗಿ ಸಮಯ ಐದು ಘಂಟೆ ಕಳೆದರೂ ಅವರಿಬ್ಬರ ನಡುವೆ ಚರ್ಚೆ ನಡೆದೇ ಇತ್ತು. ಪ್ರತಿ ನಿತ್ಯದ ಸಂಜೆ ಐದು ಘಂಟೆಯ ಪ್ರಾರ್ಥನಾ ಸಭೆಗೆ ತಡವಾಗುತ್ತಿದ್ದರೂ ಇವರ ಗಹನ ಮಾತುಕತೆಯ ನಡುವೆ ನುಸುಳಿ ಅವರನ್ನು ಎಚ್ಚರಿಸುವ ಧೈರ್ಯ ಅಭಾ ಮತ್ತು ಮನುಗೆ ಬರಲಿಲ್ಲ. ಅವರಿಬ್ಬರ ನಡುವಿನ ಚರ್ಚೆ ಸಧ್ಯಕ್ಕೆ ನಿಲ್ಲುವ ಸೂಚನೆ ಕಾಣದಾದಾಗ ಅಭಾ ಧೈರ್ಯ ಮಾಡಿ ಗಾಂಧೀಜಿಗೆ ಹೊರಗಡೆಯಿಂದಲೇ ಗಡಿಯಾರ ತೋರಿಸಿ ಸಮಯ ಮೀರುತ್ತಿದೆಯೆಂದು ಸನ್ನೆ ಮಾಡಿ ಹೇಳಿದರು. ಇದನ್ನು ಗಮನಿಸಿದ ಗಾಂಧೀಜಿ **'ದೇವರ ಜೊತೆಗಿನ ನನ್ನ ಸಭೆಗೆ ತಡವಾಗುತ್ತಿದೆ'** ಎಂದು ಪಟೇಲರಿಗೆ ತಮ್ಮ ಪ್ರಾರ್ಥನಾ ಸಭೆಯ ಬಗ್ಗೆ ಸೂಚ್ಯವಾಗಿ ತಿಳಿಸಿ ತಡವರಿಸಿಕೊಂಡು ಎದ್ದು ನಿಂತರು.



**ಗಾಂಧೀಜಿಯ ಹತ್ಯೆಯಾಗಿ ಈಗ 75 ವರ್ಷ. ಅಹಿಂಸೆಯ ಸಾಕಾರ ಮೂರ್ತಿ ಮಹಾತ್ಮ ಗಾಂಧೀಜಿ ಅವರು ಹಿಂಸೆಗೆ ಬಲಿಯಾಗಿ ಮನುಕುಲದ ಚರಿತ್ರೆಯಲ್ಲಿ ಬುದ್ಧ, ಮತ್ತು ಏಸುಕ್ರಿಸ್ತರ ಸಾಲಿನಲ್ಲಿ ಶಾಶ್ವತ ತಾರೆಯಾಗಿ ಬೆಳಗುತ್ತಿದ್ದಾರೆ .**

ಉಪವಾಸ ಸತ್ಯಾಗ್ರಹದ ಕಾರಣದಿಂದಾಗಿ ತೀವ್ರ ಬಳಲಿಕೆಗೆ ಈಡಾಗಿದ್ದ ಗಾಂಧೀಜಿ ಸ್ವತಂತ್ರವಾಗಿ ನಡೆದಾಡಲೂ ಸಹ ಪ್ರಯಾಸ ಪಡುತ್ತಿದ್ದರು. ಹಾಗಾಗಿ ತಮ್ಮ ಇಬ್ಬರೂ ಮೊಮ್ಮಕ್ಕಳಾದ ಆಭಾ ಮತ್ತು ಮನು ಗಾಂಧಿಯವರ ಹೆಗಲ ಮೇಲೆ ಕೈ ಊರಿಕೊಂಡು ಸಂಜೆಯ ಪ್ರಾರ್ಥನಾ ಸಭೆಯ ಕಡೆಗೆ ಹೆಜ್ಜೆ ಹಾಕಿದರು. ಎಂದಿನಂತೆ ಸಂಜೆ ಸರಿಯಾಗಿ 5 ಘಂಟೆಗೆ ಆರಂಭವಾಗ ಬೇಕಿದ್ದ ಪ್ರಾರ್ಥನಾ ಸಭೆ ತಡವಾಗಿದ್ದರಿಂದ ಜನರ ಗುಂಪಿನಲ್ಲಿ ಗುಸು ಗುಸು ಆರಂಭವಾಗಿತ್ತು. ಗಾಂಧೀಜಿ ತಮ್ಮ ಇಬ್ಬರು ಮೊಮ್ಮಕ್ಕಳೊಡನೆ ಅವರ ಕೊಠಡಿಯಿಂದ ಆಚೆ ಬರುತ್ತಿರುವುದು ಕಾಣುತ್ತಿದ್ದಂತೆ ಜನರು ಖುಷಿಯಿಂದ " ಓ ಆಗೋ ಗಾಂಧಿ ಬರುತ್ತಿದ್ದಾರೆ " ಎಂದು ಉತ್ಸಾಹದಲ್ಲಿ ಉದ್ಘಾರ ತೆಗೆದರು . ಗಾಂಧೀಜಿಯ ಬಲಗಡೆಗೆ ಮನು ಮತ್ತು ಎಡಗಡೆಯಲ್ಲಿ ಆಭಾ ಇದ್ದು ಹೆಜ್ಜೆ ಹಾಕುತ್ತಿದ್ದರು. ಕೇವಲ ನೂರು ಅಡಿ ದೂರದಲ್ಲಿದ್ದ ಪ್ರಾರ್ಥನಾ ವೇದಿಕೆಯ ಕಡೆಗೆ ಹೆಜ್ಜೆ ಹಾಕುತ್ತಿದ್ದಾಗ ಪ್ರಾರ್ಥನಾ ಸಭೆಗೆ ತಡವಾಗಿದ್ದರ ಬಗ್ಗೆ ಗಾಂಧಿ ಮೆಲುದನಿಯಲ್ಲಿ ' ಪ್ರಾರ್ಥನಾ ಸಭೆಗೆ ತಡವಾಗುತ್ತಿದೆ ಎಂದು ಏಕೆ ನನಗೆ ಮೊದಲೇ ಎಚ್ಚರಿಸಲಿಲ್ಲ ' ಎಂದು ಮೊಮ್ಮಕ್ಕಳಿಗೆ ಗದರಿದರು. " ನಿಮ್ಮ ಗಂಭೀರ ಚರ್ಚೆಯ ನಡುವೆ ಬಂದು ಸಮಯ ಮೀರುತ್ತಿದೆ ಎಂದು ಎಚ್ಚರಿಸುವ ಧೈರ್ಯ ನಮಗೆ ಬರಲಿಲ್ಲ " ಎಂದು ಮನು ಉತ್ತರಿಸಿದಾಗ ಗಾಂಧೀಜಿ ' ಸಮಯಕ್ಕೆ ಸರಿಯಾಗಿ ರೋಗಿಗೆ ಔಷಧಿ ನೀಡುವುದು ದಾದಿಯರ ಕರ್ತವ್ಯ. ನಿಧಾನವಾದರೆ ರೋಗಿ ಸಾಯಲೂ ಬಹುದಲ್ಲವೇ' ಎಂದು ತಿಳಿವಳಿಕೆಯ ಮಾತು ಹೇಳಿ ಮುಂದೆ ಹೆಜ್ಜೆ ಹಾಕಿದರು.

ಗಾಂಧೀಜಿಯ ಪ್ರಾರ್ಥನಾ ಸಭೆಗೆ ಆ ವೇಳೆಗಾಗಲೇ ಸುಮಾರು 200 ರಿಂದ 250 ಜನ ಸೇರಿದ್ದರು. ಗಾಂಧೀಜಿಯವರನ್ನು ಕಂಡೊಡನೆ ಅವರೆಲ್ಲ ಕೈ ಜೋಡಿಸಿ ಗಾಂಧೀಜಿಗೆ ನಮಸ್ಕರಿಸುತ್ತಿದ್ದರು. ಗಾಂಧೀಜಿ ಕೂಡಾ ಜನರಿಗೆ ಪ್ರತಿ ನಮಸ್ಕರಿಸುತ್ತಾ ನಿಧಾನವಾಗಿ ಪ್ರಾರ್ಥನಾ ವೇದಿಕೆಯ ಬಳಿಗೆ ಬಂದರು. ಜನರ ಗುಂಪಿನ ನಡುವೆ ಖಾಕಿ ಉಡುಗೆ ತೊಟ್ಟು ನಿಂತಿದ್ದ ಹಂತಕ ಗೋಡ್ಸೆ ಗಾಂಧೀಜಿಯವರಿಗೆ ಬಾಗಿ ನಮಸ್ಕರಿಸುವಂತೆ ಮುಂದೆ ಬಂದಾಗ ಮನು ಗಾಂಧಿ ಆತನಿಗೆ ಕೈ ಅಡ್ಡ ಹಿಡಿದು ' ಅಣ್ಣಾ , ಪ್ರಾರ್ಥನಾ ಸಭೆಗೆ ಈಗಾಗಲೇ ತಡವಾಗಿದೆ. ದಾರಿ ಬಿಡಿ' ಎಂದು ಹೇಳಿ ಮುಂದಕ್ಕೆ ಬರುತ್ತಿದ್ದಂತೆಯೇ ಗೋಡ್ಸೆ ತನ್ನ ಎಡಗೈಯಿಂದ ಆಕೆಯನ್ನು ಬದಿಗೆ ದೂಡಿದ. ಮನು ಕೈಯಲ್ಲಿದ್ದ ಪುಸ್ತಕ, ಜಪಮಣಿಗಳು ನೆಲಕ್ಕೆ ಬಿದ್ದವು. ಮನು ಸಾವರಿಸಿಕೊಂಡು ಕೆಳಗೆ ಬಿದ್ದಿದ್ದ ಅವುಗಳನ್ನು ಎತ್ತಿಕೊಂಡು ನಿಲ್ಲುವಷ್ಟರಲ್ಲಿ ಆಗಬಾರದ ಅನಾಹುತ ಆಗಿ ಹೋಗಿತ್ತು. ಗೋಡ್ಸೆ ತನ್ನ ಎರಡೂ ಕೈಗಳ ನಡುವೆ ಅಡಗಿಸಿ ಇಟ್ಟುಕೊಂಡಿದ್ದ ಕಪ್ಪು ಬಣ್ಣದ ಇಟಾಲಿಯನ್ ನಿರ್ಮಿತ ಬೆರೆಟ್ಟಾ ಪಿಸ್ತೂಲನ್ನು ಹೊರ ತೆಗೆದು ಮುನ್ನುಗ್ಗಿ ಗಾಂಧೀಜಿಯ ಎದುರಿಗೇ ನಿಂತು ಅವರ ಎದೆಗೆ ಮತ್ತು ಕಿಬ್ಬೊಟ್ಟೆಗೆ ಒಂದರ ಹಿಂದೊಂದರಂತೆ ಮೂರು ಗುಂಡುಗಳನ್ನು ಕೈಅಳತೆಯ ದೂರದಿಂದಲೇ ಹಾರಿಸಿದ. ಶಕ್ತಿಯುತವಾಗಿದ್ದ ವಿದೇಶಿ ನಿರ್ಮಿತ ಆ ಪಿಸ್ತೂಲಿನಿಂದ ಹಾರಿದ ಗುಂಡುಗಳು ಗಾಂಧೀಜಿಯ ದೇಹಕ್ಕೆ ತೂರಿ ಹೊರ



ಬಂದವು. ಎದೆ ಕಿಬ್ಬೊಟ್ಟೆಯಿಂದ ರಕ್ತ ಚಿಮ್ಮಿ ಅವರು ಹೊದ್ದಿದ್ದ ಶಾಲು ರಕ್ತಮಯವಾಯಿತು. ಅಲ್ಲಿ ಏನಾಗುತ್ತಿದೆ ಎಂದು ಸುತ್ತ ಮುತ್ತಲಿನವರಿಗೆ ಅರಿವಾಗುವ ವೇಳೆಗಾಗಲೇ ಗಾಂಧೀಜಿ ಹಿಂದಕ್ಕೆ ಒರಗಿ ನೆಲಕ್ಕೆ ಕುಸಿದಿದ್ದರು . "**ಹೇ ರಾಮ್ .. ಹೇ ರಾಮ್** " ಎನ್ನುವ ಕ್ಷೀಣ ದನಿಯೊಡನೆ ಅಂತಿಮವಾಗಿ ಗಾಂಧೀಜಿ ಕಣ್ಣು ಮುಚ್ಚಿದರು. ಆಗ ಸಮಯ ಸಂಜೆ 5 ಘಂಟೆ 17 ನಿಮಿಷವಾಗಿತ್ತು.

ಹತ್ಯೆ ನಡೆದಾಗ ಗಾಂಧೀಜಿಯವರ ಹಿಂದೆಯೇ ನಡೆದು ಬರುತ್ತಿದ್ದ ಆಪ್ತ ಸಹಾಯಕ ಬ್ರಿಜ್ ಕೃಷ್ಣ, ಆಪ್ತ ಕಾರ್ಯದರ್ಶಿ ಕಲ್ಯಾಣಂ ಗರ ಬಡಿದವರಂತೆ ಹಾಗೆ ನಿಂತು ಕೊಂಡು ಬಿಟ್ಟರು. ಅವರಿಗೆ ಅರಿವಿಲ್ಲದಂತೆ ಅವರ ಕಣ್ಣುಗಳಲ್ಲಿ ಕಣ್ಣೀರು ಹರಿಯಿತು. ಗಾಂಧೀಜಿಯವರ ರಕ್ತಸಿಕ್ತ ದೇಹವನ್ನು ಮನು ಮತ್ತು ಆಭಾ ತಮ್ಮ ತೊಡೆಯ ಮೇಲೆ ಇಟ್ಟು ಕೊಂಡು ಗೋಳಾಡುತ್ತಿದ್ದರು. ನಂತರ ಗಾಂಧೀಜಿಯ ಆಪ್ತಸಹಾಯಕರು ಅವರ ಮೃತ ದೇಹವನ್ನು ಬಿರ್ಲಾ ಭವನದ ಅವರ ಕೊಠಡಿಗೆ ತಂದು ಚಾಪೆಯ ಮೇಲೆ ಮಲಗಿಸಿದರು.

ಮಹಾತ್ಮ ಗಾಂಧೀಜಿಯವರ ಹತ್ಯೆಯ ವಿಷಯ ಕ್ಷಣ ಮಾತ್ರದಲ್ಲಿ ಪ್ರಧಾನಿ ನೆಹರೂ ಕಚೇರಿಗೆ ಮತ್ತು ಭಾರತದ ಗೌರ್ನರ್ ಜನರಲ್ ಆಗಿದ್ದ ಲಾರ್ಡ್ ಮೌಂಟ್ ಬ್ಯಾಟನ್ ಇವರ ಕಚೇರಿಗಳಿಗೆ ತಲುಪಿತು. ಈ ಸುದ್ದಿ ಕೇಳಿದ ಕೂಡಲೇ ಲಾರ್ಡ್ ಮೌಂಟ್ ಬ್ಯಾಟನ್ ಬೆಚ್ಚಿ ಬಿದ್ದರು. ತಮ್ಮ ಸಹಾಯಕ ಕ್ಯಾಂಪ್ ಬೆಲ್ ಜಾನ್ಸನ್ ಅವರಿಗೆ " **ಗಾಂಧಿಯನ್ನು ಕೊಂದವರು ಯಾರು? ಅಕಸ್ಮಾತ್ ಆತ ಮುಸ್ಲಿಂ ಆಗಿದ್ದರೆ ಇಡೀ ಜಗತ್ತು ಅರಿಯದ ಭೀಕರ ನರಹತ್ಯೆಯನ್ನು ನಾವು ಕಾಣಲಿದ್ದೇವೆ**" ಎಂದು ಆತಂಕದಿಂದ ನುಡಿದರು. ಈ ಸುದ್ದಿ ತಿಳಿದ ಕೂಡಲೇ ನೆಹರೂ ತಮ್ಮ ಕಚೇರಿಯಿಂದ ಧಾವಿಸಿ ಬಂದರು. ಗಾಂಧಿ ಭೇಟಿ ಮುಗಿಸಿ ವಾಪಸಾಗಿದ್ದ ಪಟೇಲ್ ಕೂಡಾ ಧಾವಿಸಿದರು. ಬಿರ್ಲಾ ಭವನದ ಸುತ್ತ ಮುತ್ತ ಜನಜಂಗುಳಿ ಶುರುವಾಯಿತು.

ಗಾಂಧೀಜಿಯವರ ಹತ್ಯೆಯ ಶೋಕದ ಸುದ್ದಿಯನ್ನು ದೆಹಲಿಯ ಆಕಾಶವಾಣಿ ಪ್ರಥಮವಾಗಿ ಪ್ರಸಾರ ಮಾಡಿತು. **' ಗಾಂಧಿಯವರನ್ನು ಇಂದು ಸಂಜೆ 5.20 ಕ್ಕೆ ದೆಹಲಿಯಲ್ಲಿ ಹತ್ಯೆ ಮಾಡಲಾಗಿದೆ. ಅವರನ್ನು ಹತ್ಯೆ ಮಾಡಿದವನು ಹಿಂದೂ '** ಎಂದು ವಿಶೇಷ ಸುದ್ದಿ ಪ್ರಸಾರ ಮಾಡಿತು. ಲಾರ್ಡ್ ಮೌಂಟ್ ಬ್ಯಾಟನ್ ಅವರ ಸೂಚನೆಯ ಮೇರೆಗೆ ಹತ್ಯೆ ಮಾಡಿದವನು ಹಿಂದೂ ಎನ್ನುವ ಸುದ್ದಿಗೆ ಹೆಚ್ಚು ಒತ್ತು ಕೊಟ್ಟು ಆಕಾಶವಾಣಿ ಸುದ್ದಿ ಪ್ರಸಾರ ಮಾಡಿತು ಎನ್ನುವ ಮಾತುಗಳು ಅಂದಿನ ಸುದ್ದಿ ವಲಯದಲ್ಲಿ ಹರಿದಾಡುತ್ತಿದ್ದವು.

ಪ್ರಧಾನಿ ನೆಹರು ಅವರಂತೂ ಈ ಸುದ್ದಿಯಿಂದ ದಿಗ್ಭ್ರಾಂತರಾಗಿದ್ದರು. ಈ ದಿಗ್ಭ್ರಾಂತಿಯ ಸಂದರ್ಭದಲ್ಲೂ ಅವರು ನಿಂತಲ್ಲೇ ರಾಷ್ಟ್ರವನ್ನು ಉದ್ದೇಶಿಸಿ ಮಾಡಿದ ಅವರ ಅಮೋಘ ಭಾಷಣ ಹೀಗಿತ್ತು. " ನಮ್ಮೆಲ್ಲರ ಬದುಕಿನಿಂದ ಬೆಳಕು ನಂದಿ ಹೋಗಿದೆ. ಎಲ್ಲೆಲ್ಲೂ ಕತ್ತಲು ಆವರಿಸಿದೆ. ನಿಮಗೆ ಏನು ಹೇಳಬೇಕು ಮತ್ತು ಹೇಗೆ ಹೇಳಬೇಕು ಎನ್ನುವುದೇ ನನಗೆ ತಿಳಿಯುತ್ತಿಲ್ಲ. ನಮ್ಮ ನೆಚ್ಚಿನ ನಾಯಕ ರಾಷ್ಟ್ರಪಿತ ಬಾಪೂ ಇನ್ನಿಲ್ಲ. ಆದರೆ, ಅದು ಒಂದು ಅರ್ಥದಲ್ಲಿ ತಪ್ಪು. ಹಲವಾರು ವರ್ಷಗಳಿಂದ ನಾವು ನೋಡಿದ್ದಂತೆ ಮತ್ತೆ ಅವರನ್ನು ನೋಡಲು ಆಗುವುದಿಲ್ಲ. ಸಲಹೆ ಕೇಳಲು ಅವರ ಬಳಿ ಓಡೋಡಿ ಹೋಗುವಂತಿಲ್ಲ, ಸಾಂತ್ವನ ಕೇಳುವಂತಿಲ್ಲ. ಇದು ಆಘಾತಕಾರಿ ಹೊಡೆತ. ಕೇವಲ ನನಗಷ್ಟೇ ಅಲ್ಲ. ಈ ದೇಶದ ಲಕ್ಷ ಲಕ್ಷ ಜನರಿಗೆ ಆಗಿರುವ ನಷ್ಟ.ಈ ಹೊಡೆತದ ಆಘಾತವನ್ನು ಯಾವುದೇ ಸಲಹೆ, ಯಾರದೇ ಸಾಂತ್ವನಗಳಿಂದ ಮೃದುಗೊಳಿಸಿಕೊಳ್ಳುವುದು ಬಹಳ ಕಷ್ಟ. ಬೆಳಕು ಆರಿ ಹೋಗಿದೆ ಎಂದು ನಾನು ಹೇಳಿದ್ದೇನೆ. ಆದರೆ ಇಂದು ಒಂದು ಅರ್ಥದಲ್ಲಿ ಸರಿಯಲ್ಲ. ಈ ದೇಶಕ್ಕೆ ಬೆಳಕು ತೋರಿದ ಅದು ಸಾಧಾರಣ ಬೆಳಕಲ್ಲ. ಇಷ್ಟು ವರ್ಷಗಳ ಕಾಲ ಈ ದೇಶವನ್ನು ಬೆಳಗಿದ ಬೆಳಕು. ಇನ್ನೂ ಹಲವಾರು ವರ್ಷಗಳ ಕಾಲ ಅದು ಈ ದೇಶವನ್ನು ಬೆಳಗುತ್ತದೆ. ಸಾವಿರಾರು ವರ್ಷಗಳ ನಂತರವೂ ಈ ಬೆಳಕನ್ನು ದೇಶದಲ್ಲಿ ನೋಡಬಹುದು "ಗದ್ಗದಿತ ದನಿಯಲ್ಲಿ ದೇಶವನ್ನು ಉದ್ದೇಶಿಸಿ ಮಾತನಾಡಿದ ಈ ಭಾಷಣ ರಾಷ್ಟ್ರ ನಾಯಕರೊಬ್ಬರು ಮಾಡಿದ ಮಾದರಿ ಶೋಕ ಸಂದೇಶವೆಂದು ಈಗಲೂ ಹೆಸರಾಗಿದೆ.

ಗಾಂಧೀಜಿಯ ಹತ್ಯೆಯಾಗಿ ಈಗ 75 ವರ್ಷ. ಅಹಿಂಸೆಯ ಸಾಕಾರ ಮೂರ್ತಿ ಮಹಾತ್ಮ ಗಾಂಧೀಜಿ ಅವರು ಹಿಂಸೆಗೆ ಬಲಿಯಾಗಿ ಮನುಕುಲದ ಚರಿತ್ರೆಯಲ್ಲಿ ಬುದ್ಧ , ಮತ್ತು ಏಸುಕ್ರಿಸ್ತರ ಸಾಲಿನಲ್ಲಿ ಶಾಶ್ವತ ತಾರೆಯಾಗಿ ಬೆಳಗುತ್ತಿದ್ದಾರೆ .

**(ಈ ಲೇಖನವು (ಸಂಪಾದಿತ ಭಾಗ) ಜನವರಿ 29, 2023 ರ ಪ್ರಜಾವಾಣಿ ದಿನಪತ್ರಿಕೆಯ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟವಾಗಿದೆ)**

**ಎನ್ ಆರ್ ವಿಶುಕುಮಾರ್**
ಉಪಾಧ್ಯಕ್ಷರು,
ಕರ್ನಾಟಕ ಗಾಂಧಿ ಸ್ಮಾರಕ ನಿಧಿ.



# ದಕ್ಷಿಣ ರಾಜ್ಯಗಳ ಗಾಂಧಿ ಸ್ಮಾರಕ ನಿಧಿ ಸದಸ್ಯರ ಸಮ್ಮೇಳನ

**ಕ**ಳೆದ ಒಂದು ವರ್ಷದಿಂದ ಈಚೆಗೆ ದಕ್ಷಿಣ ರಾಜ್ಯಗಳ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗಳ ಚಟುವಟಿಕೆಗಳು ಚುರುಕಾಗಿವೆ. ಕಳೆದ ವರ್ಷ ಜೂನ್ ತಿಂಗಳಿನಲ್ಲಿ ಹೈದರಾಬಾದಿನಲ್ಲಿ ದಕ್ಷಿಣ ಭಾರತದ ಕರ್ನಾಟಕ, ತಮಿಳುನಾಡು, ಆಂದ್ರಪ್ರದೇಶ, ತೆಲಂಗಾಣ, ಕೇರಳ ಮತ್ತು ಪಾಂಡಿಚೇರಿ ರಾಜ್ಯಗಳ ಗಾಂಧಿ ಸ್ಮಾರಕ ನಿಧಿಗಳ ಸುಮಾರು ಐವತ್ತಕ್ಕೂ ಹೆಚ್ಚು ಸದಸ್ಯರು ಮತ್ತು ಪದಾಧಿಕಾರಿಗಳು ಹೈದರಾಬಾದ್ ನಲ್ಲಿ ನಡೆದ ಎರಡು ದಿನಗಳ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

ಈ ಸಮ್ಮೇಳನದಲ್ಲಿ ನೆರೆಹೊರೆಯ ರಾಜ್ಯಗಳಲ್ಲಿ ಗಾಂಧಿ ಸ್ಮಾರಕ ನಿಧಿಯ ಕಾರ್ಯ ಚಟುವಟಿಕೆಗಳು ಹೇಗೆ ನಡೆಯುತ್ತಿವೆ ಎನ್ನುವುದರ ಪ್ರಾಥಮಿಕ ಮಾಹಿತಿ ದೊರೆಯಿತು. ಆ ಸಮ್ಮೇಳನದಲ್ಲಿ ಕರ್ನಾಟಕ ರಾಜ್ಯದ ಗಾಂಧಿ ಸ್ಮಾರಕ ನಿಧಿಯ ಚಟುವಟಿಕೆಗಳು ಇತರೆ ರಾಜ್ಯಗಳ ಗಮನ ಸೆಳೆಯಿತು. 2018 ಮುಂಚೆ ಇದ್ದ ಕರ್ನಾಟಕ ಸರ್ಕಾರವು ಗಾಂಧಿ ವಿಚಾರ ಮತ್ತು ಮೌಲ್ಯಗಳ ಪ್ರಚಾರಕ್ಕೆ ಬದ್ಧವಾಗಿ ತಲಾ ಮೂರು ಕೋಟಿ ರೂಗಳ ವೆಚ್ಚದಲ್ಲಿ ಮುವ್ವತ್ತು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಮಾಡಲು ಒಟ್ಟು 90 ಕೋಠಿ ರೂಗಳನ್ನು ನೀಡಿದ ನಿರ್ಧಾರ ನೆರೆ ಹೊರೆಯ ರಾಜ್ಯಗಳ ಗಮನ ಸೆಳೆಯಿತು. ಗಾಂಧೀಜಿಯವರ 150 ನೇ ಜನ್ಮ ದಿನಾಚರಣೆಯನ್ನು ರಾಜ್ಯಾದ್ಯಂತ ಆಚರಿಸಿದ ವಿಷಯವೂ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು.

ಈ ಎಲ್ಲದರ ಹಿನ್ನೆಲೆಯಲ್ಲಿ 2023 ನೇ ವರ್ಷದಲ್ಲಿ ದಕ್ಷಿಣ ರಾಜ್ಯಗಳ ಇನ್ನೊಂದು ಸಮ್ಮೇಳನವನ್ನು ಕರ್ನಾಟಕದಲ್ಲಿಯೇ ಮಾಡಬೇಕೆಂದು ಎಲ್ಲ ರಾಜ್ಯಗಳು ಮತ್ತು ಕೇಂದ್ರ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯು ನಿರ್ಧಾರ ತೆಗೆದು ಕ್ಕೊಂಡಿದ್ದವು. ಅದರಂತೆ 2023 ರ ಜನವರಿ. 21, 22 ಮತ್ತು 23 ರಂದು ಮೂರು ದಿನಗಳ ಸಮ್ಮೇಳನವನ್ನು ಬೆಂಗಳೂರಿನಲ್ಲಿ ಸಂಘಟಿಸಲಾಗಿತ್ತು. ದಕ್ಷಿಣದ ಐದು ರಾಜ್ಯಗಳ ಸುಮಾರು 50 ಕ್ಕೂ ಹೆಚ್ಚು ಪ್ರತಿನಿಧಿಗಳು ಇದರಲ್ಲಿ





ಭಾಗವಹಿಸಿದ್ದರು. ಈ ಸಮ್ಮೇಳನವನ್ನು ಕರ್ನಾಟಕದ ಖ್ಯಾತ ರಂಗಕರ್ಮಿ ಮತ್ತು ಗಾಂಧಿ ಚಿಂತಕ ಪ್ರಸನ್ನ ಹೆಗ್ಗೋಡು ಅವರು ಉದ್ಘಾಟಿಸಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ವೂಡೇ ಪಿ ಕೃಷ್ಣ ಅವರು ಪ್ರಾಸ್ತಾವಿಕ ಭಾಷಣ ಮಾಡಿದರು. ನಾಡೋಜ ಹಂ ಪ ನಾಗರಾಜಯ್ಯ ನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ರಾಮಚಂದ್ರ ರಾಹಿ ಅಧ್ಯಕ್ಷತೆ ವಹಿಸಿದ್ದರು; ಕಾರ್ಯದರ್ಶಿ ಸಂಜಯ್ ಸಿಂಗ್ ಅವರು ಸಮ್ಮೇಳನದ ಸಮನ್ವಯ ಕಾರ್ಯ ನಿರ್ವಹಿಸಿದರು. ಗಾಂಧಿ ಶಾಂತಿ ಪ್ರತಿಷ್ಠಾನದ ರಾಷ್ಟ್ರ ಸಮಿತಿ ಅಧ್ಯಕ್ಷರಾದ ಕುಮಾರ್ ಪ್ರಶಾಂತ್ ಅವರು ಸಮಾರೋಪ ನುಡಿಗಳನ್ನು ಆಡಿದರು. ದೆಹಲಿಯ ಗಾಂಧಿ ಮ್ಯೂಸಿಯಂ ನಿರ್ದೇಶಕರಾದ ಎ. ಅಣ್ಣಾಮಲೈ, ಕರ್ನಾಟಕದ ಹಿರಿಯ ಗಾಂಧಿವಾದಿ ಮಾಜಿ ರಾಜ್ಯಸಭಾ ಸದಸ್ಯರಾದ ಹನುಮಂತಪ್ಪ ಮತ್ತು ಸುಮಂಗಲಿ ಸೇವಾಶ್ರಮದ ಸುಶೀಲಮ್ಮ ಅವರು ಸಮಾರೋಪ ಸಮಾರಂಭದಲ್ಲಿ ಗೌರವ ಅತಿಥಿಗಳಾಗಿದ್ದರು.

ಪ್ರಸ್ತುತ ಭಾರತಕ್ಕೆ ಗಾಂಧಿ ವಿಚಾರಗಳನ್ನು ಹೊರತುಪಡಿಸಿ ಇತರೆ ಪಾಶ್ಚಿಮಾತ್ಯ ವಿಚಾರಗಳು ಹೊಂದಿಕೆ ಆಗುವುದಿಲ್ಲ. ಭಾರತದ ಅಭ್ಯುದಯಕ್ಕೆ ಗಾಂಧಿ ಮಾರ್ಗ ಬಿಟ್ಟು ಬೇರೆ ಮಾರ್ಗವಿಲ್ಲ ಅವುಗಳನ್ನು ಜನರಿಗೆ ಪರಿಣಾಮಕಾರಿಯಾಗಿ ತಲುಪಿಸಲು ರಂಗಭೂಮಿಯನ್ನು ಬಳಸಿಕೊಳ್ಳ ಬೇಕು ಎಂದು ಪ್ರಸನ್ನ ಹೆಗ್ಗೋಡು ಅವರು ಕರೆ ನೀಡಿದರು.

1948 ಜನವರಿ 30ರಂದು ಗಾಂಧೀಜಿಯವರ ಹತ್ಯೆಯಾದ ನಂತರ ಅವರ ವಿಚಾರಗಳು ಮತ್ತು ಮೌಲ್ಯಗಳನ್ನು ದೇಶದಲ್ಲಿ ಉಳಿಸಿ ಬೆಳೆಸಲು 1948 ರಲ್ಲಿ ಸ್ಥಾಪನೆಯಾದ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗೆ ಈಗ 75 ವರ್ಷಗಳು ತುಂಬುತ್ತಿದೆ. ಹಾಗೆಯೆ ಗಾಂಧೀಜಿ ಹತ್ಯೆಯಾಗಿ ಕೂಡಾ 75 ವರ್ಷವಾಗುತ್ತಿದೆ. ಈ ಹಿನ್ನೆಲೆಯಲ್ಲಿ ವರ್ಷ ಪೂರ್ತಿ ಅರ್ಥಪೂರ್ಣ ಕಾರ್ಯಕ್ರಮಗಳನ್ನು ದೇಶಾದ್ಯಂತ ಹಮ್ಮಿಕೊಳ್ಳ ಬೇಕು ಎನ್ನುವ ನಿರ್ಧಾರವನ್ನು ತೆಗೆದುಕೊಳ್ಳಲಾಯಿತು . ಇತ್ತೀಚಿನ ವರ್ಷಗಳಲ್ಲಿ ಗಾಂಧೀಜಿಯವರನ್ನು ಹೀಯಾಳಿಸುವ ಅವರ ಬಗ್ಗೆ ಅಪಪ್ರಚಾರ ಮಾಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಇದಕ್ಕೆ ಆಳುವ ಸರಕಾರಗಳು ಕೂಡಾ ಕುಮ್ಮಕ್ಕು ನೀಡುತ್ತಿವೆ. ಇದರ ವಿರುದ್ಧ ಇಡೀ ದೇಶದಲ್ಲಿ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗಳು ಸಂಘಟಿತವಾಗಿ ಜನರ ಮುಂದೆ ಹೋಗಿ ಹೋರಾಟ ನಡೆಸಬೇಕು. ವಿಶೇಷವಾಗಿ ಯುವ ಸಮುದಾಯಕ್ಕೆ ಗಾಂಧಿ ವಿಚಾರಗಳನ್ನು ತಲುಪಿಸುವ ಕಾರ್ಯವನ್ನು ಗಟ್ಟಿ ನಿಲುವಿನಿಂದ ಮಾಡ ಬೇಕು ಎಂದು ತೀರ್ಮಾನಿಸಲಾಯಿತು.

ದಕ್ಷಿಣ ರಾಜ್ಯಗಳ ನಡುವೆ ಇನ್ನಷ್ಟು ಹೆಚ್ಚು ಸಮನ್ವಯ ಸಾಧಿಸಲು ಅಣ್ಣಾಮಲೈ ಅವರ ಅಧ್ಯಕ್ಷತೆಯಲ್ಲಿ ಬೆಂಗಳೂರನ್ನು ಕೇಂದ್ರವನ್ನಾಗಿಟ್ಟು ಕೊಂಡು ಒಂದು ಸಮನ್ವಯ ಸಮಿತಿಯನ್ನು ರಚಿಸಬೇಕು, ಅದರಲ್ಲಿ ಎಲ್ಲ ರಾಜ್ಯಗಳ ಪ್ರತಿನಿಧಿ ಇರಬೇಕು ಎಂದು ಅಭಿಪ್ರಾಯ ವ್ಯಕ್ತವಾಯಿತು.

ಸಮ್ಮೇಳನದಲ್ಲಿ ಭಾಗವಹಿಸಿದ್ದ ಎಲ್ಲ ರಾಜ್ಯಗಳು ತಮ್ಮ ರಾಜ್ಯಗಳಲ್ಲಿ ನಡೆಯುತ್ತಿರುವ ಚಟುವಟಿಕೆಗಳ ಮಾಹಿತಿಯನ್ನು ಸಭೆಗೆ ನೀಡಿದರು. ಕೇರಳ ರಾಜ್ಯದಲ್ಲಿ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯಲ್ಲಿ ಉಂಟಾಗಿರುವ ಭಿನ್ನಾಭಿಪ್ರಾಯವನ್ನು ಮುಂದಿನ ಒಂದೆರಡು ತಿಂಗಳಲ್ಲಿ ಬಗೆ ಹರಿಸಿಕೊಂಡು ಮುಂದಿನ ಸಮ್ಮೇಳನವನ್ನು ಜೂನ್ ತಿಂಗಳಿನಲ್ಲಿ ಕೇರಳದಲ್ಲಿ ನಡೆಸಬೇಕೆಂದು ತೀರ್ಮಾನಿಸಲಾಯಿತು.

ಸಮ್ಮೇಳನದ ಮೂರನೇ ದಿನ ಆಸಕ್ತ ಸದಸ್ಯರನ್ನು ಅರಸೀಕೆರೆಯ ಕಸ್ತೂರ್ ಬಾ ಆಶ್ರಮಕ್ಕೆ ಕರೆದು ಕೊಂಡು ಹೋದೆವು. ದೆಹಲಿಯ ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ಕುಮಾರ್ ಪ್ರಶಾಂತ್ ಅರಸೀಕೆರೆ ಆಶ್ರಮ ನೋಡಿ ಬೆರಗಾಗಿ ಮುಂದಿನ ಜೂನ್ ತಿಂಗಳಿನಲ್ಲಿ ನಡೆಸ ಬೇಕೆಂದಿರುವ ರಾಷ್ಟ್ರೀಯ ಯುವ ಸಮ್ಮೇಳನವನ್ನು ಇಲ್ಲಿಯೇ ನಡೆಸುತ್ತೇನೆ ಎಂದು ಘೋಷಣೆಯನ್ನೇ ಮಾಡಿದರು. ಆಶ್ರಮದ ಹೆಣ್ಣು ಮಕ್ಕಳಿಂದ ಪ್ರಾರ್ಥನೆ ಮತ್ತು ಅವರೊಡನೆ ಸಣ್ಣ ಮಾತು ಕತೆಯೂ ನಡೆಯಿತು. ಕಸ್ತೂರ್ ಬಾ ಆಶ್ರಮದ ಜಮೀನಿನಲ್ಲೇ ನಡೆಸುತ್ತಿರುವ ಗೋಶಾಲೆಗೆ ಮತ್ತು ಆಶ್ರಮದ ಸಾವಯವ ತೋಟಕ್ಕೆ ಸದಸ್ಯರುಗಳು ಭೇಟಿ ನೀಡಿ ಕಾಲಾಡಿಸಿ ಬೇಲದ ಹಣ್ಣಿನ ಪಾನಕ, ನೀರು ಮಜ್ಜಿಗೆ ಕುಡಿದು ನಿರಾಳರಾದರು.

ಮಧ್ಯಾಹ್ನ ಅಲ್ಲಿಯೇ ಊಟ ಮುಗಿಸಿ ಅರಸೀಕೆರೆಗೆ ಸಮೀಪದಲ್ಲೇ ಇರುವ ಬೇಲೂರಿಗೂ ಭೇಟಿ ಕೊಟ್ಟು ಅಲ್ಲಿನ ವಿಶ್ವ ಖ್ಯಾತಿಯ ಕಲಾ ಕೃತಿಗಳನ್ನು ನೋಡಿ ಸಂಭ್ರಮಿಸಿದರು.

ರಾತ್ರಿ ಸದಸ್ಯರುಗಳೆಲ್ಲ ವಾಪಸ್ ಗಾಂಧಿ ಭವನಕ್ಕೆ ಬಂದು ಮರು ದಿನ ತಮ್ಮ ತಮ್ಮ ರಾಜ್ಯಗಳಿಗೆ ತೆರಳಿದರು. ಸಮ್ಮೇಳನದಲ್ಲಿ ಪಾಲ್ಗೊಂಡ ಯಾರಿಗೂ ಹೋಟೆಲ್ನಲ್ಲಿ ವಾಸ್ತವ್ಯ ಮಾಡಿರಲಿಲ್ಲ.ಕೇಂದ್ರ ಸ್ಮಾರಕ ನಿಧಿಯ ಅಧ್ಯಕ್ಷರಾದ ರಾಮಚಂದ್ರ ರಾಹಿ ಅವರಿಂದ ಆರಂಭಿಸಿ ಸಾಮಾನ್ಯ ಸದಸ್ಯರವರೆಗೂ ಎಲ್ಲರೂ ಗಾಂಧಿ ಭವನದ ಸಾಮಾನ್ಯ ಕೊಠಡಿಗಳಲ್ಲೇ ಉಳಿದು ಕೊಂಡಿದ್ದರು. ಅವರಿಗೆ ಅಲ್ಲಿಯೇ ಅಡುಗೆ ಮಾಡಿ ಸರಳ ಊಟ ತಿಂಡಿ ನೀಡಿ ಸತ್ಕರಿಸಲಾಯಿತು. ■



## ಪ್ರಜಾಪ್ರಭುತ್ವದ ರಕ್ಷಣೆಯಲ್ಲಿ

# ಗಾಂಧಿ ಮಾರ್ಗದ ಮಹತ್ವ

ಪ್ರಜಾಪ್ರಭುತ್ವದ ರಕ್ಷಣೆಯಲ್ಲಿ ಗಾಂಧಿ ಮಾರ್ಗದ ಮಹತ್ವ ಎಂಬ ವಿಚಾರದಲ್ಲಿ ಪ್ರಜಾಪ್ರಭುತ್ವ ಎಂದರೇನು ಮತ್ತು ಗಾಂಧಿ ಮಾರ್ಗ ಎಂದರೇನು ಎನ್ನುವುದು ಬಹಳ ಮುಖ್ಯ ವಿಚಾರಗಳಾಗಿವೆ.

ನಿಜವಾದ ಪ್ರಜಾಪ್ರಭುತ್ವ ಎಂದರೆ ಪ್ರತ್ಯಕ್ಷ ಪ್ರಜಾಪ್ರಭುತ್ವ. ಪುರಾತನ ಭಾರತದ ಗಣರಾಜ್ಯಗಳ ಹಾಗೆ. ಎಲ್ಲ ತೀರ್ಮಾನಗಳನ್ನೂ ಜನರೆಲ್ಲ ಒಂದೇ ಕಡೆ ಸೇರಿ ತೆಗೆದುಕೊಳ್ಳುವುದಾಗಿದೆ. ಸ್ವಾರಸ್ಯವೆಂದರೆ ಬದಲಾದ ಸ್ವರೂಪದಲ್ಲಿ ಗಾಂಧಿ ಮಾರ್ಗದ ಅತ್ಯಂತಿಕ ಗುರಿಯೂ ಕೂಡ ಅದೇ. ಗಾಂಧೀಜಿಯವರ ಗ್ರಾಮ ಸ್ವರಾಜ್ಯದಲ್ಲಿ ಪ್ರತಿಯೊಂದು ಗ್ರಾಮವೂ ಸ್ವಾಯತ್ತ ಆಗುತ್ತದೆ. ಗ್ರಾಮದ ಜನರೆಲ್ಲ ಸೇರಿದ ಗ್ರಾಮ ಸಭೆಯೇ ತೀರ್ಮಾನಗಳನ್ನು ತೆಗೆದುಕೊಳ್ಳುತ್ತದೆ. ಸ್ವರಾಜ್ಯದಲ್ಲಿ ಪೊಲೀಸರ ಅಥವಾ ನ್ಯಾಯಾಲಯದ ಅಥವಾ ಆಡಳಿತದ ಭಯದಿಂದ ಕಾನೂನು ಪಾಲನೆ ಆಗುವುದಿಲ್ಲ. ಸ್ವಯಂ ಶಿಸ್ತಿನಿಂದ ನೈತಿಕತೆಯ ಅರಿವಿನಿಂದ ಕಾನೂನು ಪಾಲನೆ ಆಗುತ್ತದೆ. ಆದರೆ ಈ ಗ್ರಾಮ ಸ್ವರಾಜ್ಯವಿನ್ನೂ ಬಹುದೂರದಲ್ಲಿದೆ, ನನ್ನ ಜೀವಿತಾವಧಿಯಲ್ಲಿ ನಾನು ಅದನ್ನು ಕಾಣಲು ಆಗುವುದಿಲ್ಲ ಎಂಬ ಯಾತನಾಮಯವಾದ ಅರಿವು ನನಗಿದೆ ಎಂದು ಸ್ವತಃ ಗಾಂಧೀಜಿಯವರೇ ಹೇಳಿದ್ದಾರೆ.

ಇವತ್ತು ನಾವಿರುವುದು ಪ್ರತ್ಯಕ್ಷ ಪ್ರಜಾಪ್ರಭುತ್ವದಲ್ಲಲ್ಲ. ಜನರೇ ನಡೆಸುವ ಆಡಳಿತದಲ್ಲೂ ಅಲ್ಲ. ಸಂವಿಧಾನದ ಆಡಳಿತವನ್ನು ಜನರ ಪ್ರತಿನಿಧಿಗಳು ನಡೆಸುವ ಪರೋಕ್ಷ ಪ್ರಜಾಪ್ರಭುತ್ವದಲ್ಲಿ. ಸಂವಿಧಾನದ ಮೂಲ ತತ್ವಗಳನ್ನು ಬದಲಿಸುವಂತಿಲ್ಲ. ಇದರ ಬಗ್ಗೆ ಅಂಬೇಡ್ಕರ್ ಸಂವಿಧಾನ ಸಭೆಯಲ್ಲಿ " ನಾವು ಯಾವುದನ್ನು ರಾಷ್ಟ್ರೀಯತೆ ಎಂದುಕೊಂಡಿದ್ದೇವೆಯೋ ಅದನ್ನೆ ಮುಂದಿನ ಎಲ್ಲ ತಲೆಮಾರುಗಳೂ ಒಪ್ಪುತ್ತವೆಯೆ?" ಎಂಬ ಪ್ರಶ್ನೆ ಎತ್ತಿದ್ದರು. ಸಂವಿಧಾನ ರಚನಾ ಸಭೆ ಫೈನಲಿ ಡಿಸೈಡೆಡ್ ಎಂಬ ತೀರ್ಮಾನ ತೆಗೆದುಕೊಳ್ಳದಿದ್ದರೆ ವಿವೇಕ ತೀರಾ ದುರ್ಬಲವಾಗಿರುವ ಈ ದಿನಗಳ ಪರಿಸ್ಥಿತಿ ವಿಪರೀತ ಬಿಗಡಾಯಿಸುತ್ತಿತ್ತು.

ಬ್ರಿಟಿಷ್ ಪ್ರಜಾಪ್ರಭುತ್ವ ನಮಗಿಂತ ತುಸು ಜಾಸ್ತಿ ಅಭಿವೃದ್ಧಿ ಹೊಂದಿದ ಪ್ರಜಾಪ್ರಭುತ್ವ. ಅಲ್ಲಿ ಅಲಿಖಿತ ಸಂವಿಧಾನವಿದೆ. ಜನಪ್ರತಿನಿಧಿಗಳು ಸ್ವಯಂ ಶಿಸ್ತಿನಿಂದ ತಾವು ರೂಪಿಸಿಕೊಂಡ ನಂಬಿಕೆಯ ಸಂವಿಧಾನಕ್ಕೆ ಬದ್ಧರು. ಯಾವ ವಿಧಿನಿಯಮ ಏನನ್ನು ಹೇಳುತ್ತದೆ ಎಂದು ಕೂದಲು ಸೀಳುವ ವಾದಗಳು ಅಲ್ಲಿ ಅಗತ್ಯ ಬರುವುದಿಲ್ಲ. ಮತ್ತು ಅಲ್ಲಿನ ಅತ್ಯುನ್ನತ ನ್ಯಾಯಾಂಗವಾದ ಹೌಸ್ ಆಫ್ ಲಾರ್ಡ್ಸ್ ಒಂದು ಪ್ರತಿನಿಧಿ ಸಭೆಯಾಗಿದೆ.

ಭಾರತದ ಪ್ರಜಾಪ್ರಭುತ್ವ ಲಿಖಿತ ಸಂವಿಧಾನದಿಂದ ನಡೆಯುತ್ತದೆ. ವರ್ತಮಾನದ ಸನ್ನಿವೇಶವನ್ನು ನೀವೇ ನೋಡುತ್ತಿದ್ದೀರಿ; ಪರಸ್ಪರ ವಿರುದ್ಧ ಅಭಿಪ್ರಾಯ ಉಳ್ಳವರೆಲ್ಲರೂ ತಮ್ಮ ಅಭಿಪ್ರಾಯವೇ ಸಂವಿಧಾನದ ಆಶಯ ಎಂದು ಸಂವಿಧಾನವನ್ನು ವ್ಯಾಖ್ಯಾನಿಸುತ್ತಿದ್ದಾರೆ. ಉದಾಹರಣೆಗೆ ಹೇಳುವುದಾದರೆ ಯಾವುದೇ ಜಾತಿ, ಧರ್ಮ, ವರ್ಗ, ವರ್ಣಗಳನ್ನು ನಿಂದಿಸಬಾರದು ಎಂದು ಸಂವಿಧಾನವು ಹೇಳಿದೆ ಎಂದರೆ ನಮ್ಮ ಪ್ರಾಜ್ಞರು,

ಬುದ್ಧಿಜೀವಿಗಳು, ವಿದ್ವಾಂಸರುಗಳ ಪ್ರಕಾರ ಅವರಿಗೆ ಆಗದ ಸಮುದಾಯವನ್ನು ನಿಂದಿಸಬಹುದು ಮತ್ತು ಅವರಿಗೆ ಬೇಕಾದ ಸಮುದಾಯವನ್ನು ನಿಂದಿಸತಕ್ಕದ್ದಲ್ಲ ಎಂದು ಅರ್ಥ ವಿವರಣೆ ಸಿಗುತ್ತದೆ. ಅಂದರೆ ನಮ್ಮಲ್ಲಿ ವಿದ್ವಾಂಸರಲ್ಲೆ ಬೇಸಿಕ್ ಸ್ವಯಂ ಶಿಸ್ತು ಕಳೆದುಹೋಗಿರುವುದರ ಸೂಚನೆ ಇದು. ಕಟ್ಟ ಕಡೆಗೆ ಸಂವಿಧಾನವನ್ನು ಅರ್ಥೈಸಬೇಕಾಗಿರುವ ಮತ್ತು ಸಂವಿಧಾನದ ಮಹಾನ್ ಸಂರಕ್ಷಕನಾಗಿರುವ ಸರ್ವೋಚ್ಚ ನ್ಯಾಯಾಲಯವು ಪ್ರತಿನಿಧಿ ಸಭೆ ಅಲ್ಲ. ನೇಮಕಾತಿಗೊಂಡ ನ್ಯಾಯಾಂಗೀಯ ತಜ್ಞರ ಸಭೆಯಾಗಿದೆ.

ಇಷ್ಟಾಗಿಯೂ ನಮ್ಮಲ್ಲಿನ ಪರೋಕ್ಷ ಪ್ರಜಾಪ್ರಭುತ್ವವು ಚುನಾವಣೆಗಳ ಮೂಲಕ ಉಳಿದಿದೆ. ಇದನ್ನು ನಿರಾಶೆಯಿಂದ ಹೇಳುತ್ತಿಲ್ಲ. ಚುನಾವಣೆಯು ಪರೋಕ್ಷ ಪ್ರಜಾಪ್ರಭುತ್ವದ ಪ್ರಬಲ ಆಧಾರ ಸ್ತಂಭವೇ ಆಗಿದೆ.

ರಾಜಕೀಯ ಪ್ರಜಾಪ್ರಭುತ್ವವು ಬಲಗೊಳ್ಳುವುದು ಸಾಮಾಜಿಕ ಪ್ರಜಾಪ್ರಭುತ್ವದ ಮೂಲಕ. ಸಮಾಜದಲ್ಲಿ ಎಷ್ಟರ ಮಟ್ಟಿಗೆ ಪ್ರಜಾಸತ್ತಾತ್ಮಕ ಮನೋಧರ್ಮ ಇದೆ ಎನ್ನುವುದು ಮುಖ್ಯವಾಗಿದೆ. ಈ ವಿಚಾರಕ್ಕೆ ಬಂದಾಗ ಗಾಂಧಿ ಮಾರ್ಗ ಮಹತ್ವ ಪಡೆಯುತ್ತದೆ.

ಅಹಿಂಸೆಯನ್ನು ಪ್ರಾಯೋಗಿಕವಾಗಿಯೇ ಅನುಷ್ಠಾನಕ್ಕೆ ತಂದವರು ಗಾಂಧೀಜಿ. ಅದರಿಂದ ಕೆಲವೊಂದು ನಷ್ಟಗಳೂ ಆಗಿವೆ ನಿಜ. ಆದರೆ ಪ್ರಜಾಪ್ರಭುತ್ವವನ್ನು ಬಲಪಡಿಸುವ ಅತೀ ಮಹತ್ವದ ತತ್ವ ಅಹಿಂಸೆ. ಪ್ರಜಾಪ್ರಭುತ್ವವು ಉಳಿದೆಲ್ಲ ಪ್ರಭುತ್ವಕ್ಕಿಂತ ಭಿನ್ನವಾಗಿ ಉಳಿಯುವುದು ಅಹಿಂಸೆಯ ತತ್ವದಲ್ಲಿ. ಏಕೆಂದರೆ ಪ್ರಜಾಪ್ರಭುತ್ವದಲ್ಲಿ ಮಾತಿನ ಶಕ್ತಿಗೆ ಅಪಾರ ಮಹತ್ವವಿದೆ. ಕೋಟಿಗಳ ಲೆಕ್ಕದಲ್ಲಿ ಖರ್ಚಾದರೂ ಸರಿಯೇ ಎಂದು ಸಂಸತ್ತು ಮತ್ತು ವಿಧಾನ ಮಂಡಲಗಳೆಂಬ ಮಾತಿನ ಸಭೆಗಳಿವೆ. ಸಮಸ್ಯೆಗಳು ಮಾತಿನ ಮೂಲಕವೇ ಪರಿಹಾರವಾಗಬೇಕೆಂಬುದು ಅದರ ಆಶಯವಾಗಿದೆ. ಯಾಕೆ ಮಾತಿನ ಮೂಲಕ ಪರಿಹಾರವಾಗಬೇಕು? ಮಾತಿನ ಮೂಲಕ ಪರಿಹಾರವಾದಾಗ ಅಲ್ಲಿ ದೈಹಿಕ ಹಲ್ಲೆಗೆ ಅವಕಾಶ ಇರುವುದಿಲ್ಲ; ಅಂದರೆ ಅಹಿಂಸಾತ್ಮಕ ವಿಧಾನದ ಮೂಲಕ ಸಮಸ್ಯೆ ಬಗೆಹರಿಯಬೇಕು ಎನ್ನುವುದು ಪ್ರಜಾಪ್ರಭುತ್ವದ ಆಶಯವಾಗಿದೆ. ನಿಜವಾಗಿ ಗಾಂಧೀಜಿ ಈ ಸಂಸದೀಯ ಪ್ರಜಾಪ್ರಭುತ್ವದ ಬಗ್ಗೆ ಬಹಳ ಒಲವಿರಿಸಿಕೊಂಡಿದ್ದವರಲ್ಲ. ಬ್ರಿಟಿಷ್ ಸಂಸತ್ತಿನ ಬಗ್ಗೆ ಒಮ್ಮೆ ಅವರು," ಮಾತಾಡಿಕೊಂಡು ಸುಮ್ಮನೇ ಕಾಲಹರಣ ಮಾಡುವ ಜಾಗ" ಎಂದಿದ್ದರು. ಗಾಂಧೀಜಿಗೆ ಕ್ರಿಯೆ ಬಹಳ ಮುಖ್ಯ. ಗಾಂಧೀಜಿಯ ಒಲವಿಗೆ ಸರಿಹೊಂದುವುದು ಅಧ್ಯಕ್ಷೀಯ ಪ್ರಜಾಪ್ರಭುತ್ವ. ನಿಜವಾಗಿ ಮಾತಿನ ಸಭೆಯ ಬಗ್ಗೆ ಬಹಳ ಕಾಳಜಿ ಇದ್ದವರು ಜವಾಹರ ಲಾಲ್ ನೆಹರೂ. ಆದರೆ ಗಾಂಧೀಜಿಯ ಅಹಿಂಸಾ ತತ್ವಕ್ಕೆ ಹೆಚ್ಚು ಪರವಾಗಿರುವುದು ಸಂಸದೀಯ ಪ್ರಜಾಪ್ರಭುತ್ವವೇ ಆಗಿದೆ. ಇದು ಗಾಂಧೀಜಿಯ ವೈಯಕ್ತಿಕ ಒಲವು ಮತ್ತು ತತ್ವಗಳ ನಡುವೆ ಏರ್ಪಡುವ ವಿರೋಧಾಭಾಸದ ಸಂಗತಿಯೂ ಆಗಿದೆ. ಇನ್ನೊಂದು ವಿರೋಧಾಭಾಸವಿದೆ. ಅದನ್ನು ಆಮೇಲೆ ಹೇಳುತ್ತೇನೆ.

ಪ್ರಜಾಪ್ರಭುತ್ವ ಫಂಕ್ಷನಿಂಗ್ ಆಗುವ ವಿಧಾನಗಳನ್ನು ಗಮನಿಸಿ. ನಮ್ಮಲ್ಲಿ 'ಜನ ಸ್ನೇಹಿ ಪೊಲೀಸ್' ಎಂಬ ಪರಿಕಲ್ಪನೆ ಇದೆ. ಯಾಕೆ ಜನ ಸ್ನೇಹಿ ಪೊಲೀಸ್? ಫಯರಿಂಗ್ ಮಾಡ್ಲಿಕಾವುದಿಲ್ವ ಎಂದು ಕೇಳಿದರೆ ಹೇಗಾದೀತು. ಸಮಸ್ಯೆ ಪರಿಹಾರವಾಗುತ್ತದಲ್ಲ. ಚೀನಾದಲ್ಲಿ ತೈನೆನ್ಮೇನ್ ಚೌಕದಲ್ಲಿ ಪ್ರತಿಭಟನಾ ನಿರತ ವಿದ್ಯಾರ್ಥಿಗಳನ್ನು ಕೊಂದು ಹಾಕಿದರು. ಸಮಸ್ಯೆ ಪರಿಹಾರವಾಯಿತಲ್ಲ. ಸಮಸ್ಯೆ ಹೇಳುವವನೇ ಇಲ್ಲ. ಯು.ಎಸ್.ಎಸ್.ಆರ್. ನಲ್ಲಿ ಸ್ಟಾಲಿನ್ 25 ಲಕ್ಷ ಜನರ ಹತ್ಯೆ ಮಾಡಿದ್ದಾಯಿತು. ಪ್ರಾಬ್ಲಮ್ ಸಾಲ್ವ್ಡ್. ಅಲ್ಲಿನದ್ದು ಕಮ್ಯುನಿಸ್ಟ್ ಪ್ರಭುತ್ವ. ಕಾರ್ಲ್ ಮಾರ್ಕ್ಸ್ ತತ್ವ ಬೇರೆ. ಕಾರ್ಲ್ ಮಾರ್ಕ್ಸ್ ಪ್ರಕಾರ ಪ್ರಾಲಿಟೇರಿಯೇಟ್ ಡಿಕ್ಟೇಟರ್ಶಿಪ್ ಬರಬೇಕು. ಇಲ್ಲಿ ಬಂದದ್ದು ಪಾಲಿಟ್ ಬ್ಯೂರೋ ಡಿಕ್ಟೇಟರ್ಶಿಪ್. ಹಿಟ್ಲರ್ ಜರ್ಮನಿಯಲ್ಲಿ, ಮುಸಲೋನಿ ಇಟಲಿಯಲ್ಲಿ ಆಗದವರನ್ನೆಲ್ಲ ಕೊಲ್ಲಿಸಿದ್ದೇ. ಏಕೆಂದರೆ ಅಲ್ಲಿ ಸರ್ವಾಧಿಕಾರವಿತ್ತು. ಅಂತಹ ರಾಷ್ಟಗಳಲ್ಲಿ ಜನ ಸ್ನೇಹಿ ಪೊಲೀಸ್ನ ಪರಿಕಲ್ಪನೆ ಬರುವುದಿಲ್ಲ. ಅಮೆರಿಕದಲ್ಲಿ ಒಬ್ಬ ಪೊಲೀಸ್ ನಾಗರಿಕರ ಮೇಲೆ ನಡೆಸಿದ ದೌರ್ಜನ್ಯಕ್ಕೆ ಉಳಿದ ಪೊಲೀಸರು ಕ್ಷಮೆ ಕೇಳಿದ ಘಟನೆ ನಾಲ್ಕು ವರ್ಷಗಳ ಹಿಂದೆ ನಡೆಯಿತು. ಅಲ್ಲಿ ಪೊಲೀಸರ ಬಳಿ ಆಯುಧ ಇಲ್ಲದೆ ಅಲ್ಲ. ಆದರೆ ಅದೊಂದು ಪ್ರಜಾಪ್ರಭುತ್ವ ರಾಷ್ಟ. ಯಾವುದೇ ಪ್ರಜಾಪ್ರಭುತ್ವ ರಾಷ್ಟದ ಮೊದಲ ಆಯ್ಕೆ ಅಹಿಂಸೆಯೇ ಆಗಿರುತ್ತದೆ. ಕಟ್ಟ ಕಡೆಯ ಅನಿವಾರ್ಯವಾದ ಆಯ್ಕೆಯಾಗಿ ಮಾತ್ರ ಆಯುಧ ಪ್ರಯೋಗಕ್ಕೆ ಅಲ್ಲಿ ಮನಸ್ಸಿಲ್ಲದ ಮನಸ್ಸಿನ ಒಪ್ಪಿಗೆ ಇರುತ್ತದೆ. ಒಂದು ಪ್ರಭುತ್ವವಾದಾಗ ಅನಿವಾರ್ಯ ಆಯ್ಕೆಯಾಗಿ ಹಿಂಸೆಯ ಪ್ರಯೋಗ ಆಗುವುದರ ಬಗ್ಗೆ ಗಾಂಧೀಜಿಯೂ ಮೌನಿಯಾಗಿದ್ದರು. "ಬರೀ ಅಹಿಂಸೆಯೇ ಆದರೆ ನನ್ನ ಸೈನಿಕರಿಗೆ ನಾನು ಯಾವ ಕೆಲಸ ಕೊಡಲಿ?" ಎಂದು ಜನರಲ್ ಕಾರ್ಯಪ್ಪ ಕೇಳಿದಾಗ ಗಾಂಧೀಜಿ," ಅದು ನನಗೂ ಹೊಳೆಯುತ್ತಿಲ್ಲ. ನಾನು ದೇವರ ದೊಡ್ಡ ಮಗು. ನೀವು ಚಿಕ್ಕ ಮಗು. ಉತ್ತರ ಮೊದಲು ನಿಮಗೆ ಹೊಳೆದರೆ ನೀವು ನನಗೆ ಹೇಳಿ. ನನಗೆ ಹೊಳೆದರೆ ನಾನು ನಿಮಗೆ ಹೇಳುತ್ತೇನೆ. ಆದರೆ ಭಾರತಕ್ಕೊಂದು ಬಲಿಷ್ಠ ಸೇನೆಯಂತೂ ಬೇಕು" ಎಂದು ಗಾಂಧೀಜಿ ಉತ್ತರಿಸಿದ್ದರು.

ಪ್ರಜಾಪ್ರಭುತ್ವದ ಮೊದಲ ಆಯ್ಕೆ ಅಹಿಂಸೆಯೇ ಎಂಬ ನಿಟ್ಟಿನಲ್ಲಿ ಗಾಂಧೀಜಿ ಯಾವುದೇ ಪ್ರಜಾಪ್ರಭುತ್ವ ರಾಷ್ಟಕ್ಕೆ ಪ್ರಸ್ತುತರಾಗಿದ್ದಾರೆ. ಹಾಗಿದ್ದರೆ ಕೊನೆಯ ಅನಿವಾರ್ಯ ಆಯ್ಕೆಯಾದ ಆಯುಧ ಪ್ರಯೋಗದ ಅವಶ್ಯಕತೆ ಪ್ರಜಾಪ್ರಭುತ್ವದ ಒಳಗೆ ಯಾಕೆ ಬರುತ್ತದೆ? ಮಾತಿನ ಶಕ್ತಿ ದುರ್ಬಲವಾದಾಗ ಬರುತ್ತದೆ. ಮಾತಿನ ಶಕ್ತಿ ದುರ್ಬಲವಾಗುವುದು ನೈತಿಕತೆಯ ಕುಸಿತ ಉಂಟಾದಾಗ. " ನೀನು ಒಳ್ಳೆಯವನಲ್ಲ" ಎಂದು ಒಬ್ಬ ಹೇಳಿದಾಗ ಇವನು ಯಾಕೆ ನನಗೆ ಹೀಗೆ ಹೇಳಿದ ಎಂದು ಯೋಚಿಸಿ ತಿದ್ದಿಕೊಳ್ಳಬೇಕಾದ್ದು ಸಾರ್ವಜನಿಕ ನೈತಿಕತೆ. " ನೀನು ಒಳ್ಳೆಯವನಲ್ಲ" ಎಂದಾಗ ಅರ್ಥ ಮಾಡಿಕೊಂಡು ಸ್ಪಂದಿಸದಿದ್ದರೆ ಆಮೇಲೆ ಅವನು ಹೊಡೆಯಲು ಬರುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಅದೇ ರೀತಿ ಒಬ್ಬ



ಮನುಷ್ಯನನ್ನು " ನೀನು ಒಳ್ಳೆಯವನಲ್ಲ" ಎಂದು ಹೇಳುವವನಿಗೂ ಖಚಿತ ಆಧಾರ ಇಲ್ಲದೆ, ತನ್ನ ಮನಸ್ಸಿಗೆ ತೀವ್ರವಾದ ಹಿಂಸೆಯಾಗದೆ ಯಾರಿಗೂ ಆ ರೀತಿ ತಾನು ಹೇಳಬಾರದು ಎಂಬ ಜವಾಬ್ದಾರಿ ಬೇಕು. ಆ ಜವಾಬ್ದಾರಿಯೇ ಪ್ರಜಾಪ್ರಭುತ್ವ. ಪ್ರಜಾಪ್ರಭುತ್ವ ಎಂದರೆ ಜವಾಬ್ದಾರಿ; ಕೇವಲ ಹಕ್ಕಲ್ಲ. ಈ ಕಾರಣಕ್ಕಾಗಿಯೇ ನನ್ನ ಹಿಂದೂ ಸಹೋದರರಲ್ಲಿ, ಮುಸ್ಲಿಂ ಸಹೋದರರಲ್ಲಿ ಹುಡುಗರು ಏನಾದರೂ ದ್ವೇಷ ಪೂರಿತ ಮಾತಾಡಿದಾಗ ನನಗೆ ಆಗುವ ಆತಂಕಕ್ಕಿಂತ ಜ್ಞಾನಿಗಳು ಎಂದು ನಾವು ಭಾವಿಸಿದವರು ದ್ವೇಷ ಪೂರಿತವಾಗಿ ಮಾತನಾಡಿದಾಗ ಜಾಸ್ತಿ ಆತಂಕವಾಗುತ್ತದೆ. ಹುಡುಗರ ಸಂಖ್ಯೆ ಅದೆಷ್ಟೇ ದೊಡ್ಡದಿದ್ದರೂ ತಿಳಿಸಿ ಹೇಳಬಹುದು. ಆದರೆ ತಿಳಿವಳಿಕೆ ಇರುವ ಜ್ಞಾನಿಗಳಿಗೆ ತಿಳಿಸಿ ಹೇಳಬಹುದಾದ್ದೇನೂ ಇರುವುದಿಲ್ಲ. ಇವರಿಗೇ ಮಾತಿನ ಶಕ್ತಿಯ ಅರಿವಿಲ್ಲದಿದ್ದರೆ ಪ್ರಜಾಪ್ರಭುತ್ವವನ್ನು ರಕ್ಷಿಸುವುದು ಹೇಗೆ? ಸಮಾಜದ ಮೊದಲ ಆಯ್ಕೆಯೇ ಆಯುಧ ಪ್ರಯೋಗ ಎಂದು ಆದ ದಿವಸ ಪ್ರಜಾಪ್ರಭುತ್ವ ಉಳಿಯುವುದಿಲ್ಲ. ಆದ್ದರಿಂದ ಅಹಿಂಸಾ ತತ್ವದ ರಕ್ಷಣೆಯ ಮೂಲಕವೇ ಪ್ರಜಾಪ್ರಭುತ್ವದ ರಕ್ಷಣೆಯೂ ಸಾಧ್ಯ.

ಪ್ರಜಾಸತ್ತಾತ್ಮಕ ಮನೋಭಾವದಲ್ಲಿ ಸಮ್ಮತಿ ಮತ್ತು ನಿರಾಕರಣೆ ಎರಡೂ ಇರುವುದು ವಿಚಾರಕ್ಕೆ. ವ್ಯಕ್ತಿಗೆ ನಿರಾಕರಣೆ ಇರುವುದಿಲ್ಲ. ಗಾಂಧೀಜಿಯ ಇಡೀ ಬದುಕು ಇದನ್ನೆ ಮಾಡುತ್ತಾ ಹೋಯಿತು. " ನಾನೊಬ್ಬ ಸನಾತನಿ ಹಿಂದೂ" ಎಂದೇ ಗಾಂಧೀಜಿ ತನ್ನನ್ನು ತಾನು ಗುರುತಿಸಿಕೊಂಡರು. ಆದರೆ ಅಸ್ಪೃಶ್ಯರಿಗೆ ಪ್ರವೇಶವಿಲ್ಲದ ದೇವಸ್ಥಾನಕ್ಕೆ ಹೋಗಲಿಲ್ಲ. ಬ್ರಾಹ್ಮಣರು ನಿಯೋಗ ಕೊಂಡೊಯ್ದು ಮೀಸಲಾತಿಯಿಂದ ನಮ್ಮ ಹುದ್ದೆಗಳು ಹೋಗುತ್ತಿವೆ ಎಂದಾಗ ಅವರ ಬೇಡಿಕೆಯನ್ನು ಗಾಂಧೀಜಿ ಪುರಸ್ಕರಿಸಲಿಲ್ಲ. ಆದರೆ ಬ್ರಾಹ್ಮಣರ ಮೇಲೆ ಸೇಡಿನ ಪ್ರತಿಪಾದನೆ ಕೇಳಿದಾಗ," ಸೇಡಿನಿಂದ ನೀವು ಏನನ್ನೂ ಸಾಧಿಸಲಾರಿರಿ. ಬ್ರಾಹ್ಮಣರು ಉನ್ನತ ಮೌಲ್ಯಗಳನ್ನು ನಮಗೆ ಬೋಧಿಸಿದ್ದಾರೆ. ದೇಶಕ್ಕಾಗಿ ತ್ಯಾಗವನ್ನೂ ಮಾಡಿದ್ದಾರೆ" ಎಂದರು. ಕೆಲವು ಮುಸ್ಲಿಮರು," ನೀವು ರಾಮ್ ರಹೀಂ ಎನ್ನಬಾರದು.ರಾಮ ಸಣ್ಣ ರಾಜ" ಎಂದಾಗ," ರಾಮ ಎಷ್ಟೇ ಸಣ್ಣ ರಾಜನಾದರೂ ಅವನು ಬಾಳಿದ ಮೌಲ್ಯಗಳು ದೊಡ್ಡದು. ರಾಮ್ ರಹೀಂ

**ರಾಜಕೀಯ ಪ್ರಜಾಪ್ರಭುತ್ವವು ಬಲಗೊಳ್ಳುವುದು ಸಾಮಾಜಿಕ ಪ್ರಜಾಪ್ರಭುತ್ವದ ಮೂಲಕ. ಸಮಾಜದಲ್ಲಿ ಎಷ್ಟರ ಮಟ್ಟಿಗೆ ಪ್ರಜಾಸತ್ತಾತ್ಮಕ ಮನೋಧರ್ಮ ಇದೆ ಎನ್ನುವುದು ಮುಖ್ಯವಾಗಿದೆ. ಈ ವಿಚಾರಕ್ಕೆ ಬಂದಾಗ ಗಾಂಧಿ ಮಾರ್ಗ ಮಹತ್ವ ಪಡೆಯುತ್ತದೆ.**

ಎಂದು ಹೇಳಿಯೇ ಹೇಳುತ್ತೇನೆ" ಎಂದರು. ವೈಸರಾಯ್ ವವೆಲ್," ಲೋಕಸಭೆಯಲ್ಲಿ ಸರ್ವಾನುಮತದಿಂದ ಅಂಗೀಕಾರವಾದ ನಿರ್ಣಯವನ್ನು ಒಂದು ವಿಟೋದಿಂದ ರದ್ದು ಪಡಿಸುವ ಅಧಿಕಾರವನ್ನು ಮುಸ್ಲಿಂ ಲೀಗಿಗೆ ಕೊಡುವುದಾದರೆ ದೇಶ ವಿಭಜನೆ ಆಗದ ಹಾಗೆ ಜಿನ್ನಾ ಬಳಿ ಮಾತಾಡುತ್ತೇನೆ" ಎಂದಾಗ ಅದೇ ದಿವಸ ಬ್ರಿಟಿಷ್ ಪ್ರಧಾನ ಮಂತ್ರಿ ಕ್ಲೆಮೆಂಟ್ ಅಟ್ಲಿಯವರಿಗೆ," ನಮ್ಮ ವೈಸರಾಯರ ಬುದ್ಧಿ ಸರಿಯಾಗಿಲ್ಲ. ಅವರಿಗಿಂತ ಯೋಗ್ಯರಾದ ಸಲಹೆಗಾರರೊಬ್ಬರ ಅಗತ್ಯ ಅವರಿಗಿದೆ" ಎಂದು ಗಾಂಧೀಜಿ ಟೆಲಿಗ್ರಾಂ ಕಳಿಸಿದರು. ಆಮೇಲೆ ಜವಾಹರ ಲಾಲ್ ನೆಹರೂ ಇಂಗ್ಲೆಂಡಿಗೆ ಹೋಗಿ ವವೆಲ್ರನ್ನು ವರ್ಗಾವಣೆ ಮಾಡಿಸಿ ಮೌಂಟ್ ಬ್ಯಾಟನ್ ಅವರನ್ನು ಹಾಕಿಸಿಕೊಂಡು ಬಂದದ್ದು. ಆದರೆ ಮುಸ್ಲಿಮರ ಹತ್ಯೆ ನಡೆಯತೊಡಗಿದೆ ಎಂದಾಗ ' ಗೋ ಬ್ಯಾಕ್ ಗಾಂಧಿ' ಎಂಬ ಬೋರ್ಡನ್ನು ಕಿತ್ತೆಸೆದು ಮುಸ್ಲಿಮರ ರಕ್ಷಣೆಗೆ ದೃಢವಾಗಿ ನಿಂತುಕೊಂಡರು. " ಸಾವರ್ಕರ್ ಪ್ರತಿಭಾವಂತ. ಅವರ ಅರ್ಹತೆಗೆ ತಕ್ಕ ಸ್ಥಾನ ಕೊಡಬೇಕು" ಎಂದು ಯಂಗ್ ಇಂಡಿಯಾದಲ್ಲಿ ಬರೆದರು. ಆದರೆ ಸಾವರ್ಕರ್ ಅವರ ಹಿಂದುತ್ವದ ಐಡಿಯಾಲಜಿಯನ್ನು ಒಪ್ಪಲಿಲ್ಲ. ರಕ್ತ ಕ್ರಾಂತಿಯನ್ನು ಎಂದೂ ಒಪ್ಪಲಿಲ್ಲ. ಆದರೆ " ಕಮ್ಯುನಿಸ್ಟರು ಭಾರತದ ಕಮ್ಯುನಿಸ್ಟರವರು. ನಮ್ಮವರೇ" ಎಂದರು.

ಆರ್.ಎಸ್.ಎಸ್.ಕಛೇರಿಗೂ ಹೋಗಿ ಆಶೀರ್ವಾದ ಮಾಡಿ," ನೀವು ದೇಶ ಭಕ್ತರೇ. ಆದರೆ ಎಲ್ಲರನ್ನೂ ಒಳಗೊಳ್ಳಿ" ಎಂದು ಬಂದರು. ಇದೆಲ್ಲ ಏನನ್ನು ಸೂಚಿಸುತ್ತದೆ? ಗಾಂಧೀಜಿ ಯಾರನ್ನೂ ನಿರಾಕರಣೆ ಮಾಡಲಿಲ್ಲ. ಯಾರ ಮೇಲೂ ದ್ವೇಷದ ಮಾತಾಡಲಿಲ್ಲ. ಆದರೆ ತನ್ನ ವಿಚಾರದಲ್ಲಿ ಸ್ಥಿರವಾಗಿದ್ದರು. ಸರಿಯಾದ ವಿಚಾರವನ್ನು ಸ್ವೀಕರಿಸಿದರು. ಸರಿಯಲ್ಲ ಎನಿಸಿದ ವಿಚಾರವನ್ನು ನಿರಾಕರಿಸಿದರು. ಇದೇ ಪ್ರಜಾಪ್ರಭುತ್ವದ ಮೂಲ ತತ್ವ. ವೈಚಾರಿಕ ಸ್ಥಿರತೆಯ ಬಗ್ಗೆ ಗಾಂಧೀಜಿ ಎಷ್ಟು ಚಂದ ಮಾಡಿ ಹೇಳುತ್ತಾರೆಂದರೆ," ದುಷ್ಟರ ಮೇಲೂ ಹಿಂಸೆ ಮಾಡಬೇಡಿ. ಆದರೆ ದುಷ್ಟತನಕ್ಕೆ ಯಾವ ಕಾರಣಕ್ಕೂ ಶರಣಾಗಬೇಡಿ" ಎನ್ನುತ್ತಾರೆ.

ಕಾಲಹರಣದ ಚರ್ಚೆಯನ್ನು ನಿರಾಕರಿಸಿದ ಗಾಂಧೀಜಿ ಮಾತಿನ ಶಕ್ತಿಯನ್ನು ನಿರಾಕರಿಸಲಿಲ್ಲ. ದೇಶ ವಿಭಜನೆಯನ್ನು ತಡೆಯಲು ಜಿನ್ನಾ ಜೊತೆ ಮಾತನಾಡಲು ಯಾವ ನಾಯಕರೂ ತಯಾರಿಲ್ಲದಾಗ ಗಾಂಧೀಜಿ ಒಂಟಿಯಾಗಿ ಜಿನ್ನಾ ಬಳಿಗೆ ಹೋದರು. ಆ ಘಟನೆಯನ್ನು ದೃಶ್ಯೀಕರಣ ಮಾಡಿಕೊಂಡು ಯೋಚಿಸಿದರೆ ಬಹಳ ಸ್ವಾರಸ್ಯವಿದೆ. ಆ ದಿವಸ ಗಾಂಧೀಜಿಗೆ ಹೊಟ್ಟೆ ನೋವು. ಹೊಟ್ಟೆಗೆ ಮಣ್ಣಿನ ಪಟ್ಟಿ ಹಾಕಿಕೊಂಡು ಜಿನ್ನಾ ನಿವಾಸಕ್ಕೆ ಹೋಗುತ್ತಾರೆ. ಜಿನ್ನಾ ಅವರು ಪರ್ಶಿಯಾದಿಂದ ತರಿಸಿ ಹಾಸಿದ ಹಾಸಿನ ಮೇಲೆ ಗಾಂಧೀಜಿಯ ಮಣ್ಣಿನ ಪಟ್ಟಿಯಿಂದ ಮಣ್ಣು ಸ್ವಲ್ಪ ಸ್ವಲ್ಪ ಬೀಳುತ್ತಿರುತ್ತದೆ. ಜಿನ್ನಾ ಸಿಟ್ಟಿನಲ್ಲಿ ಮುಷ್ಠಿ ಬಿಗಿಯುತ್ತಾರೆ, ಬಿಡುತ್ತಾರೆ. ಗಾಂಧೀಜಿ ಅದನ್ನು ಗಮನಕ್ಕೆ ತೆಗೆದುಕೊಳ್ಳದೆ ಮಾತಾಡುತ್ತಾರೆ. " ಬ್ರಿಟಿಷರು ಹೋಗಲಿ. ಆಮೇಲೆ ಕುಳಿತು ಮಾತನಾಡುವ. ಎಷ್ಟು ಮಾತ್ರಕ್ಕೂ ಒಮ್ಮತ ಸಾಧ್ಯವಾಗದಿದ್ದರೆ ಅಣ್ಣ- ತಮ್ಮಂದಿರು ಆಸ್ತಿ ಪಾಲು ಮಾಡಿಕೊಂಡ ಹಾಗೆ ನಾವೇ ದೇಶ ವಿಭಜನೆ ಮಾಡಿಕೊಳ್ಳುವ" ಎನ್ನುತ್ತಾರೆ. ಜಿನ್ನಾ ಒಪ್ಪಲಿಲ್ಲ. ಆ ವಿಷಯ ಬೇರೆ. ಆದರೆ ಗಾಂಧೀಜಿ ಮಾತಿನ ಮೇಲೆ ನಂಬಿಕೆಯನ್ನು ಕಳೆದುಕೊಳ್ಳಲಿಲ್ಲ. ಮಾತಿನ ಮೇಲೆ ನಂಬಿಕೆಯನ್ನು ಕಳೆದುಕೊಳ್ಳದಿರುವುದು ಪ್ರಜಾಪ್ರಭುತ್ವದ ಮೂಲ ಅವಶ್ಯಕತೆಗಳಲ್ಲೊಂದು.

ಪ್ರಜಾಪ್ರಭುತ್ವದ ಬಹುಮುಖ್ಯವಾದ ಮತ್ತೊಂದು ಲಕ್ಷಣವೆಂದರೆ ವಿಮರ್ಶಾತ್ಮಕ ಮನೋಧರ್ಮ. ವಿಮರ್ಶೆಗೂ ಬೈಗುಳ

ಮತ್ತು ತಿರಸ್ಕಾರಗಳಿಗೂ ವ್ಯತ್ಯಾಸ ಹೊರಟು ಹೋಗಿರುವ ಕಾಲಮಾನದಲ್ಲಿ ನಾವಿದ್ದೇವೆ. ವಿಮರ್ಶೆಯು ಯಾವಾಗಲೂ ವಿಚಾರ ಕೇಂದ್ರಿತವಾದದ್ದು. ವ್ಯಕ್ತಿ ಕೇಂದ್ರಿತ ಅಲ್ಲ. ವಿಮರ್ಶೆಯಲ್ಲಿ ವ್ಯಕ್ತಿಯ ಮೇಲೆ ಅಗೌರವ ಇರುವುದಿಲ್ಲ. ವ್ಯಕ್ತಿ ನಿಂದನೆ ಇರುವುದಿಲ್ಲ. ಗಾಂಧೀಜಿ ಜೀವನದುದ್ದಕ್ಕೂ ಇದನ್ನು ಪ್ರತಿನಿಧಿಸುತ್ತಾ ಹೋದರು. ಗಾಂಧೀಜಿ ತಮ್ಮ ಮೇಲಿನ ಟೀಕೆಗಳನ್ನು ಸ್ವಾಗತಿಸುತ್ತಾ ಇದ್ದರು. ಅವರನ್ನು ಪ್ರಶ್ನಿಸಿದವರಿಗೆ ಉತ್ತರ ಕೊಡುತ್ತಿದ್ದರು. ಆ ಉತ್ತರವನ್ನು ಅವರು ಸ್ವೀಕರಿಸುತ್ತಾರೋ ಇಲ್ಲವೋ ಬೇರೆ ವಿಚಾರ. ಆದರೆ ಉತ್ತರವನ್ನಂತೂ ಗಾಂಧೀಜಿ ಕೊಡುತ್ತಿದ್ದರು. " ಗ್ರಾಮಗಳಲ್ಲಿಯೇ ಜಾತೀಯತೆ ಇರುವುದು, ಗ್ರಾಮ ಸ್ವರಾಜ್ಯ ಜಾತೀಯತೆಯನ್ನು ಬಲಪಡಿಸುತ್ತದೆ" ಎಂದು ಅಂಬೇಡ್ಕರರು ಮಾಡಿದ ಟೀಕೆಗಳಿಗೆ ಪದೇ ಪದೇ ಗಾಂಧಿ," ನಾನು ಹೇಳುತ್ತಿರುವ ಗ್ರಾಮ ಹಳೆಯ ಗ್ರಾಮಗಳಲ್ಲ" ಎಂದು ಅವರ ಗ್ರಾಮದ ಪರಿಕಲ್ಪನೆಯನ್ನು ಮತ್ತೆ ಮತ್ತೆ ವಿವರಿಸಿದರು. ಗಾಂಧೀಜಿಗೆ ಯಾವ ಅಧಿಕಾರವೂ ಇರಲಿಲ್ಲ. ಆದರೆ ಅಧಿಕಾರದಲ್ಲಿದ್ದ ಬ್ರಿಟಿಷರು ಕೂಡ ಗಾಂಧೀಜಿಯನ್ನು ಪ್ರಶ್ನೆ ಮಾಡುತ್ತಿದ್ದರು. ಅಧಿಕಾರದಲ್ಲಿ ಇಲ್ಲದವನನ್ನು ಪ್ರಶ್ನಿಸಲು ಅಧಿಕಾರ ಇರುವವನಿಗೆ ನಾಚಿಕೆ ಆಗಬೇಕು. ನಾಚಿಕೆ ಬಿಟ್ಟು ಅಧಿಕಾರದಲ್ಲಿ ಇದ್ದವರು ಗಾಂಧೀಜಿಯನ್ನು ಪ್ರಶ್ನೆ ಮಾಡಿದರು. ಆದರೆ ಇಡೀ ಬ್ರಿಟಿಷ್ ಸಾಮ್ರಾಜ್ಯದ ಪ್ರಧಾನ ಮಂತ್ರಿಯಾದ ವಿನ್ಸನ್ ಚರ್ಚಿಲ್ ಕೇಳಿದ ಪ್ರಶ್ನೆಗಳಿಗೂ ಗಾಂಧೀಜಿ ಉತ್ತರಿಸಿದರು. ಚೌರಿ ಚೌರ ಹತ್ಯೆಗಳನ್ನಿರಿಸಿಕೊಂಡು ಗಾಂದೀಜಿಯ ಅಹಿಂಸಾ ತತ್ವ ಡೋಂಗಿ ಎಂದು ಬೇರೆ ಬೇರೆ ದೇಶದವರು ಕೇಳಿದ ಪ್ರಶ್ನೆಗಳಿಗೂ ಉತ್ತರಿಸಿದರು. ಭಗತ್ ಸಿಂಗ್ ಮತ್ತು ಸಹಚರರನ್ನು ಬಿಡಿಸಲು ಗಾಂಧೀಜಿ ಬರೆದ ಪತ್ರಗಳು, ನಡೆಸಿದ ಪ್ರಯತ್ನಗಳನ್ನು ಕಂಡು " ಇವರು ಅಹಿಂಸಾವಾದಿ ಎನ್ನುವುದೇ ಅನುಮಾನ ಬರ್ತಾ ಇದೆ" ಎಂದು ಎದ್ದ ಪ್ರಶ್ನೆಗಳಿಗೂ ಉತ್ತರಿಸಿದರು. ಈ ಉತ್ತರಿಸುವಿಕೆ ಮತ್ತು ಉತ್ತರದಾಯಿತ್ವ ಎನ್ನುವುದು ಪ್ರಜಾಪ್ರಭುತ್ವದ ಮೂಲಭೂತ ಅಗತ್ಯವಾಗಿರುತ್ತದೆ. ನಾನು ಈ ಸಾಮಾಜಿಕ ಜಾಲತಾಣಗಳಲ್ಲಿ ಬರುವ ಪ್ರಶ್ನೆಗಳಿಗೆಲ್ಲ ಉತ್ತರಿಸುವಾಗ ನನ್ನ ಹಲವು ಸ್ನೇಹಿತರು " ಇವರಿಗೆಲ್ಲ ಯಾಕೆ ಉತ್ತರ ಕೊಡುತ್ತೀರಿ?" ಎಂದು ಕೇಳುವುದಿದೆ.

ನಾನೊಬ್ಬ ಸಾಮಾನ್ಯ ಅಧ್ಯಾಪಕ. ಹೆಚ್ಚೆಂದರೆ ಒಂದು ಪಾಠವನ್ನು ಚಂದದಲ್ಲಿ ಮಾಡಲು ನನಗೆ ಶಕ್ತಿ ಇದೆ. ಹಣ ಬಲವಿಲ್ಲ. ಜನ ಬಲವಿಲ್ಲ. ಅಧಿಕಾರ ಬಲವಿಲ್ಲ. ಹೀಗಿದ್ದೂ ದೇಶವನ್ನು ಆಳಿದವರ ಕಡೆಯಲ್ಲಿರುವವರು, ಆಳುತ್ತಿರುವವರ ಕಡೆಯಲ್ಲಿರುವವರು ರಾಷ್ಟ್ರೀಯ ಸಮಸ್ಯೆಗಳನ್ನು ಹೇಗೆ ಬಗೆಹರಿಸುತ್ತಿಯೆ? ನೀನು ಸಮಾಜಕ್ಕೆ ಏನು ಕೊಟ್ಟಿದ್ದಿಯೆ? ಎಂದು ನನ್ನ ಬಳಿ ಕೇಳಲು ಅವರಿಗೆ ಮುಜುಗರವಾಗಬೇಕು. ಅವರು ಪ್ರಶ್ನಿಸಬೇಕಾದ್ದು ನನ್ನನ್ನಲ್ಲ ಎಂದು ಅವರಿಗೆ ಗೊತ್ತಿರಬೇಕು. ಅಷ್ಟಾಗಿಯೂ ನನ್ನನ್ನು ಪ್ರಶ್ನಿಸುತ್ತಾರಾದರೆ ಉತ್ತರ ಕೊಡಲು ನನಗೆ ಯಾವ ಮುಜುಗರವೂ ಇಲ್ಲ. ತೀರ್ಮಾನವನ್ನೆ ಇರಿಸಿಕೊಂಡು

ಪ್ರಶ್ನಿಸುವವರು ನನ್ನ ಉತ್ತರವನ್ನು ಒಪ್ಪುವುದಿಲ್ಲ ಎಂದು ನನಗೆ ಗೊತ್ತಿದೆ. ಆದರೂ ನನ್ನ ಬಳಿ ಉತ್ತರವಿದೆ. ಹೇಳುತ್ತೇನೆ. ಇದನ್ನು ನಾವು ಗಾಂಧೀಜಿಯಿಂದ ಕಲಿಯಬೇಕು. ತೀರಾ ಉತ್ತರವನ್ನು ಕೇಳಿಸಿಕೊಳ್ಳಲಿಕ್ಕೇ ತಯಾರಿಲ್ಲದವನಿಗೆ ಮಾತ್ರ ಉತ್ತರವನ್ನು ನಿರಾಕರಿಸಬೇಕು. ಪ್ರಶ್ನಿಸುವುದು ಮತ್ತು ಉತ್ತರಿಸುವುದನ್ನೆ ನಿಲ್ಲಿಸಿ ಎಲ್ಲರೂ ಅವರವರ ನಿಲುವಿಗೆ ಜೈ ಎನ್ನುವವರ ಗುಂಪು ಕಟ್ಟಿಕೊಂಡು ದ್ವೀಪಗಳಾದರೆ ಪ್ರಜಾಪ್ರಭುತ್ವದ ಅಸ್ತಿತ್ವ ಉಳಿಯುವುದು ಹೇಗೆ? ಆದ್ದರಿಂದಲೇ ನಮ್ಮ ಗಾಂಧಿ ವಿಚಾರ ವೇದಿಕೆ ಸಂವಾದಕ್ಕೇ ಪ್ರಥಮ ಆದ್ಯತೆಯನ್ನು ಕೊಟ್ಟಿದೆ. ಸಂವಾದ–ವಾಗ್ವಾದಗಳು ಪ್ರಜಾಪ್ರಭುತ್ವದ ಅತ್ಯುನ್ನತ ಸಂಸ್ಕೃತಿಯಾಗಿದೆ. ಭಾರತ ದೇಶದ ಸಾವಿರಾರು ವರ್ಷಗಳ ಪರಂಪರೆಯೂ ಆಗಿದೆ. ಪ್ರಜಾಪ್ರಭುತ್ವವು ಅದರೊಳಗೆ ಅನೇಕ ಪರಸ್ಪರ ವಿರೋಧಗಳನ್ನು ಜೊತೆಯಾಗಿಯೇ ಇರಿಸಿಕೊಂಡು ಬೆಳೆಯುವ ವ್ಯವಸ್ಥೆಯಾಗಿದೆ. ಇವತ್ತು ನೋಡಿ, ತುಳುನಾಡು ಎಂದರೆ ಗಾಂಧಿ ವಿರೋಧಿಗಳ ತಾಣ ಎಂಬ ಅಭಿಪ್ರಾಯ ತುಳುನಾಡಿನ ಹೊರಗೆ ಇದೆ. ಆದರೆ ಮಹಾತ್ಮಾ ಗಾಂಧಿಯವರ ಮೂರ್ತಿಗೆ ಪೂಜೆ ನಡೆಯುವ ಗುಡಿಯೂ ಇದೇ ಮಂಗಳೂರಿನಲ್ಲಿ ಇಲ್ಲಿಂದ ಎರಡು ಕಿ.ಮೀ. ಹೋದರೆ ಸಿಗುವ ಕಂಕನಾಡಿಯ ಬ್ರಹ್ಮ ಬೈದರ್ಕಳ ಗುಡಿಯಲ್ಲಿದೆ. 15 ಡಿಸೆಂಬರ್ 1948 ರಂದು ನರ್ಸಪ್ಪ ಸಾಲಿಯಾನ್ ಅವರು ಸ್ಥಾಪಿಸಿದ ಗಾಂಧಿ ಮೂರ್ತಿಗೆ ಇಂದೂ ತ್ರಿಕಾಲ ಪೂಜೆ ನಡೆಯುತ್ತಲೇ ಇದೆ. ಪ್ರಜಾಪ್ರಭುತ್ವದ ಯಶಸ್ಸು ಪರಸ್ಪರ ವಿರೋಧಗಳೊಂದಿಗೇ ವ್ಯವಸ್ಥೆಯನ್ನು ಉತ್ತಮೀಕರಿಸುವುದರಲ್ಲಿದೆ.

ವ್ಯವಸ್ಥೆಯ ಉತ್ತಮೀಕರಣಕ್ಕೆ ಗಾಂಧೀಜಿಯವರ ಮೌಲ್ಯಗಳು, ನಂಬಿಕೆಗಳು, ದಿಟ್ಟತನ, ಸಂಯಮ ಇವೆಲ್ಲವೂ ಆಧಾರ ಸ್ತಂಭಗಳಾಗಿವೆ. ತನ್ನ ನಂಬಿಕೆಗೆ ನಿಷ್ಠನಾಗಿ ಬಾಳಿದ ಮನುಷ್ಯ ಅವರು. ತನ್ನ ನಂಬಿಕೆಗೆ ನಿಷ್ಠನಾಗಿಯೇ ಉಳಿಯುವವನನ್ನು ಋಗ್ವೇದ ' ಋಷಿ' ಎಂದು ಪರಿಗಣಿಸುತ್ತದೆ. ಆ ಸತ್ವ ಗಾಂಧೀಜಿಯಲ್ಲಿರುವುದರಿಂದ ಗಾಂಧೀಜಿಯವರ ಸತ್ಯ, ಅಹಿಂಸೆಗಳ ಟೀಕಾಕಾರರೂ ತಮ್ಮ ಅಗತ್ಯ ಬಂದಾಗ ಗಾಂಧಿ ಮಾಡಿದ ಉಪವಾಸ ಸತ್ಯಾಗ್ರಹ, ಧರಣಿ, ಜಾಥಾಗಳಂತಾದ್ದನ್ನೆ ಮಾಡುತ್ತಾರೆ ಹೊರತು ಹಿಂಸೆಗಿಳಿಯುವುದಿಲ್ಲ. ಹೀಗೆ ವಿರೋಧಿಯನ್ನೂ ಗಾಂಧಿ ಮಾರ್ಗದಲ್ಲಿ ಸಾಗುವ ಹಾಗೆ ಮಾಡುವ ಮೂಲಕವೇ ಪ್ರಜಾಪ್ರಭುತ್ವದ ರಕ್ಷಣೆಯೂ ಆಗುತ್ತದೆ. ಪ್ರಕಾಪ್ರಭುತ್ವದಲ್ಲಿ ಜಾತಿ ಬಲ, ಹಣಬಲ ಎಲ್ಲ ಎಷ್ಟೇ ಇದ್ದರೂ ಯೋಗ್ಯ ನಾಯಕನೊಬ್ಬ ಇದ್ದಾಗ ಇದೆಲ್ಲವನ್ನೂ ಮೀರಿ ಜನ ಆತನನ್ನು ಆರಿಸಿಕೊಳ್ಳುತ್ತಾರೆ. 0.3% ಇರುವ ಸಮುದಾಯದಿಂದ ಬಂದ ದೇವರಾಜ ಅರಸ್ ಮುಖ್ಯಮಂತ್ರಿಯಾಗಲು ಸಾಧ್ಯ ಆಗಿದೆ. ಸ್ವತಃ ಗಾಂಧೀಜಿಯವರ ಮೋಢ ಬನಿಯಾ ಜಾತಿಯವರು . ಒಬ್ಬ ಎಂ. ಎಲ್. ಎ ಯನ್ನು ಗೆಲ್ಲಿಸಬಲ್ಲಷ್ಟು ಸಂಖ್ಯೆಯಲ್ಲಿ ಇಲ್ಲ. ಆದರೆ 154 ದೇಶಗಳಲ್ಲಿ ಗಾಂಧೀಜಿಯ ಸ್ಮಾರಕಗಳು, ಅಧ್ಯಯನ ಕೇಂದ್ರಗಳು ಇವೆ. ಕ್ರೈಸ್ತ ಬಹುಸಂಖ್ಯಾತ ರಾಷ್ಟ್ರಗಳೇ ಜಾಸ್ತಿ ಇರುವ ವಿಶ್ವ ಸಂಸ್ಥೆಯಲ್ಲೂ ಗಾಂಧೀಜಿಯ ಪ್ರತಿಮೆ ಸ್ಥಾಪನೆಯಾಯಿತು. ಅಂದರೆ ನಾಯಕತ್ವ ಯೋಗ್ಯವಾಗಿದ್ದರೆ ಜಾತಿ ಧರ್ಮ ಹಣ ಯಾವುದೂ ಬೇಕಾಗುವುದಿಲ್ಲ. ಇದು ಪ್ರಜಾಪ್ರಭುತ್ವದ ಶಕ್ತಿ. ಪ್ರಜಾಪ್ರಭುತ್ವವನ್ನು ರಕ್ಷಿಸಲು ಸಾಧ್ಯವಾಗುವುದು ನೈತಿಕ ಶಕ್ತಿಗೆ. ಆ ಶಕ್ತಿಯ ಮೂಲ ಗಾಂಧೀಜಿಯವರೇ ಎಂದು ಹೇಳುತ್ತಾ ನನ್ನ ಮಾತುಗಳನ್ನು ಮುಗಿಸುತ್ತಿದ್ದೇನೆ. ಕೇಳಿದ ಎಲ್ಲರಿಗೂ ನಾನು ಋಣಿಯಾಗಿದ್ದೇನೆ. ನಮಸ್ಕಾರ.

*** ಅರವಿಂದ ಚೊಕ್ಕಾಡಿ**

## ಪುಸ್ತಕ ಪರಿಚಯ

# ಮಿನುಗು ನೋಟ

ಎಂ.ಜಿ. ಹೆಗಡೆ ವಿರಚಿತ ಕೃತಿಯ ಒಂದು ಕಿರುನೋಟ.




ಗಾಂಧೀಜಿ ತಮ್ಮನ್ನು ತಾವು "ಸನಾತನ ಹಿಂದೂ" ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಅವರು ಆಸ್ತಿಕರಾಗಿದ್ದರು. ಅವರಿಗೂ ನೈಜ ಸನಾತನಿಗಳಲ್ಲದವರ ನಡುವೆ ನಾವು ಏನು ಭೇದವಿದೆ ಎಂದು ಕಂಡುಕೊಳ್ಳುವುದಾದರೇ, ಗಾಂಧಿಯ ಸನಾತನವು ಆದಿ ಅನಾದಿ ಅಂತ್ಯವಿಲ್ಲದ ನಿತ್ಯನೂತನ ಸತ್ಯಾನ್ವೇಷಣೆಯ ಪಥವೆನ್ನಬಹುದು. ಕುವೆಂಪು ಅದನ್ನು ಅನಿಕೇತನವೆಂದರು. ಶರಣರು ಜಂಗಮವೆಂದರು. ಇದನ್ನು ರೂಪಕ ಭಾಷೆಯಲ್ಲಿ ಹೇಳಬೇಕಾದರೆ. ಯಾವುದೇ ಬೇಲಿಯನ್ನು ಹಾಕದೆ ಇರುವ ಗೋಮಾಳವೆನ್ನಬಹುದು. ಗೋಮಾಳಗಳು ವಿಸ್ತಾರವಾಗಿರುತ್ತವೆ. ಅವುಗಳು ವಿಧವಿಧ ಮರಗಿಡಗಳಿಂದ ನಳನಳಿಸುತ್ತಿರುತ್ತವೆ. ಅಲ್ಲಿರುವ ನೀರಿನ ತಾಣಗಳು ಗೋವುಗಳ ( ಆಡು, ಕುರಿ, ಎತ್ತು, ಎಮ್ಮೆ, ಕೋಣ, ಕತ್ತೆಗಳನ್ನು ಸೇರಿಸಿ) ಬಾಯಾರಿಕೆಯನ್ನು ತಣಿಸುತ್ತವೆ. ಹಚ್ಚ ಹಸಿರಿನ ಹುಲ್ಲು, ಎಲೆತಪ್ಪಲು ಹೊಟ್ಟೆಯ ಹಸಿವನ್ನು ಬಗೆಹರಿಸಿದರೆ, ಬೀಸುವ ತಂಗಾಳಿಯು ಮೆಲುಕುಹಾಕುವ ಗೋವುಗಳ ಕರ್ಣಗಳಲ್ಲಿ ಮುರುಳಿಯ ಗಾನದ ಮಧುರ ಸುನಾದವನ್ನು ತುಂಬುತ್ತದೆ. ಗೋಮಾಳಗಳಲ್ಲಿ ಗೋವುಗಳಿಗೆ ಯಾವುದೇ ಬಂಧನವಿಲ್ಲ. ಆದ್ದರಿಂದ ಗಾಂಧಿ ತಿಳಿದಿರುವ, ಅರುಹಿದ, ನಡೆದಿರುವ ಸನಾತನ ಪಥವು ಚಲನಶೀಲತೆಯನ್ನು ಹೊಂದಿತ್ತು. ಆದರೆ ನೈಜ ಸನಾತನಿಗಳಲ್ಲದವರು ತಾವು ಸನಾತನ ಧರ್ಮದ ಪರಿಪಾಲಕರೆಂದು ಕೂಗುಮಾರಿಗಳಂತೆ ಬೊಬ್ಬಿಡುತ್ತಾ, ಧರ್ಮವನ್ನು ಕಟ್ಟಿಹಾಕುತ್ತಿದ್ದಾರೆ. ಜಡಗೊಳಿಸುತ್ತಿದ್ದಾರೆ ಗೋಶಾಲೆಗಳಂತೆ !! ಗೋಶಾಲೆಗಳಲ್ಲಿ ಗೋವುಗಳಿಗೆ ಗೋಮಾಳಗಳಂತೆ ಸ್ವಾತಂತ್ರ್ಯವಿಲ್ಲ. ಅವುಗಳಿಗೆ ಅಲ್ಲಿ ಯಾವುದೇ ಚಲನಶೀಲತೆಯಿಲ್ಲದೆ ಬದುಕು ಕ್ಷಣ ಕ್ಷಣವು ಬರಡಾಗುತ್ತದೆ.

ಗಾಂಧೀಜಿ ಭಾರತವನ್ನು ಗೋಮಾಳಗೊಳಿಸುವ ಕನಸು ಕಂಡಿದ್ದರು. ಆದರೆ, ನಾವಿಂದು ಅದನ್ನು ಗೋಶಾಲೆಯನ್ನಾಗಿ ಮಾಡಿದ್ದೇವೆ. ಹೀಗೆಯೇ ಮುಂದುವರೆದರೇ ಗೋಶಾಲೆಯು ಹೋಗಿ ಕೊಂಡವಾಡವಾಗುವುದರಲ್ಲಿ ಸಂಶಯವಿಲ್ಲ. ಭಾರತವು ಕೊಂಡವಾಡದಲ್ಲಿ ಬಂಧಿತಗೊಂಡು ಅಸುನೀಗದಿರಲೆಂದು ಮತ್ತು ಅದು ಹಾಗೆ ಆಗದಿರಲೆಂದು ನಾವುಗಳು ಗಾಂಧಿಯನ್ನು ತಿಳಿಯುವ ಅತ್ಯಂತ ಜರೂರಿ ಇಂದೀದೆ. ಈ ಪ್ರಯತ್ನದಲ್ಲಿ ಧರ್ಮದ ನೈಜ ಪರಿಪಾಲಕರು ಸಾಕಷ್ಟು ಪ್ರಯತ್ನ ಮಾಡುತ್ತಿದ್ದಾರೆ. ಅಂತಹ ಒಂದು ಪ್ರಯತ್ನವೇ ಮಂಗಳೂರಿನ ಎಂ.ಜಿ. ಹೆಗಡೆಯವರದು.

"ಮಿನುಗು ನೋಟ" ಎಂಬ ಚಿಕ್ಕ ಕೃತಿಯನ್ನು ಹೆಗಡೆ ಅವರು ಪ್ರಕಟಿಸಿದ್ದು , ಇದರಲ್ಲಿ ಗಾಂಧಿ ಕುರಿತ ಪೂರ್ವಾಗ್ರಹಪೀಡಿತ ಸಂಶಯಗಳನ್ನು ಪರಿಹರಿಸಲು ಅವರು ಪ್ರಯತ್ನಪಟ್ಟಿದ್ದಾರೆ. ಹೆಗಡೆಯವರು ಉತ್ತರಗಳನ್ನು ಆದಷ್ಟು ನೇರವಾಗಿ ಇಲ್ಲಿ ಪ್ರಸ್ತುತಪಡಿಸಿ, ಓದುಗರಲ್ಲಿ ಗಾಂಧಿ ಕುರಿತು ಇನ್ನಷ್ಟು ಓದಲು ಪ್ರೇರೆಪಿಸಿದ್ದಾರೆ. ಗಾಂಧಿ–ಅಂಬೇಡ್ಕರ, ಗಾಂಧಿ–ಪಟೇಲ, ಗಾಂಧಿ–ಭಗತಸಿಂಗ್, ಗಾಂಧಿ– ಆರ್ ಎಸ್ ಎಸ್, ಗಾಂಧಿ–ಆಧುನಿಕತೆ, ಗಾಂಧಿ– ಕಾಂಗ್ರೆಸ್ ಹೀಗೆ ಅನೇಕ ಮಹತ್ವಕರವಾದ ವಿಷಯಗಳನ್ನು ಚರ್ಚಿಸಿದ್ದಾರೆ. ಹೆಗಡೆಯವರು ತಮ್ಮ ವಾದವನ್ನು ಯಾರ ಮೇಲೂ ಒತ್ತಾಯದಿಂದ ಹೇರುವುದು ತಮ್ಮ ನಡೆಯಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

ಗಾಂಧಿ ಬಗ್ಗೆ, ಭಾರತೀಯತೆಯ ಬಗ್ಗೆ, ಈ ದೇಶದ ಬಗ್ಗೆ ತಿಳಿಯುವ ಮನಸುಳ್ಳವರು "ಮಿನುಗು ನೋಟ"ದೆಡೆಗೆ ತಮ್ಮ ನೋಟವನ್ನು ಬೀರಿದರೆ. ಅವರಿಗೆ ಧರ್ಮವನ್ನು ಅರಿಯುವ ಆಸಕ್ತಿ ಹೆಚ್ಚಾಗಿ "ಸತ್ಯವೇ ಧರ್ಮ" ವೆಂದು ತಿಳಿಯುತ್ತದೆ.

**"ಮಿನುಗು ನೋಟ"**
**ಲೇಖಕರು : ಎಂ.ಜಿ. ಹೆಗಡೆ**
**ಪ್ರಕಾಶನ : ರೂಪ ಪ್ರಕಾಶನ (9348874331)**
**ಪುಟಗಳು : 124**
**ಬೆಲೆ : ರೂ. 120/–**

**ಜಗತ್ತು ಬದಲಾಗಬೇಕು ಎನ್ನುವವರು ಮೊದಲು ತಮ್ಮಿಂದಲೇ ಬದಲಾವಣೆಯಾಗಬೇಕು ಎಂಬುದನ್ನು ಅರಿತುಕೊಳ್ಳಬೇಕು.**

–ಮಹಾತ್ಮ ಗಾಂಧಿ




**ಮಹಾತ್ಮ ಗಾಂಧೀಜಿಯವರು ಹುತಾತ್ಮರಾಗಿ 2023ರ ಜನವರಿ 30ಕ್ಕೆ 75 ವರ್ಷವಾಯಿತು. ಗಾಂಧಿ ಸ್ಮಾರಕ ನಿಧಿ ಸರ್ವೋದಯ –75 ಎಂದು ಇದನ್ನು ಆಚರಿಸಿದ ಸಂದರ್ಭದ ಚಿತ್ರಾವಳಿ**












ಭಾಗ – 1

# ಗಾಂಧಿ ಈ ಹೊತ್ತಿಗೂ ಯಾಕೆ ಪ್ರಸ್ತುತರು? ಹತ್ತು ಕಾರಣಗಳು....

–ರಾಮಚಂದ್ರ ಗುಹಾ

ಇಬ್ಬರು ವ್ಯಕ್ತಿಗಳು, ಒಬ್ಬರು ಮೋಹನದಾಸ ಕರಮಚಂದ ಗಾಂಧಿ, ಇನ್ನೊಬ್ಬರು ಡಿ.ಎಸ್. ನಾಗಭೂಷಣ ಇಬ್ಬರೂ ವಿದ್ವಾಂಸರು, ವಿಮರ್ಶಾತ್ಮಕ ವಿಶ್ಲೇಷಕರು. ಈ ಸಂದರ್ಭದಲ್ಲಿ ನಾನು ಮಾತನಾಡುತ್ತಿರುವುದು ನನ್ನ ಸುಯೋಗ ಮತ್ತು ಸಂತೋಷದ ವಿಷಯ. ನಾನು ನಾಗಭೂಷಣರೊಂದಿಗೆ ಮುಖಾಮುಖಿ ಭೇಟಿಯಾದುದು ಕುಮಾರಾ ಪಾರ್ಕಿನ ಬಳಿ ಇರುವ ಗಾಂಧಿಭವನದಲ್ಲಿ. ಅದಕ್ಕಿಂತ ಮೊದಲು ಕೆ.ವಿ. ಸುಬ್ಬಣ್ಣ ಅವರು ಹೆಗ್ಗೋಡಿನಲ್ಲಿ ಸ್ಥಾಪಿಸಿರುವ ಪ್ರತಿಷ್ಠಿತ ಸಾಂಸ್ಕೃತಿಕ ಸಂಸ್ಥೆಯ ಸಂಸ್ಕೃತಿ ಶಿಬಿರದಲ್ಲಿ. ನಾನು ಗಾಂಧಿಯ ಬಗ್ಗೆ ಮಾತನಾಡುತ್ತಿದ್ದಾಗ ಸಭಾಂಗಣದ ಹಿಂದಿನ ಸಾಲಿನಲ್ಲಿ ನಾಗಭೂಷಣ ಅವರು ಕುಳಿತಿದ್ದುದನ್ನು ನೋಡಿದ್ದೆ. ಆ ವಾರ್ಷಿಕ ಸಾಂಸ್ಕೃತಿಕ ಸಮಾರಂಭದಲ್ಲಿ, ಅದು 2017 ರ ಅಕ್ಟೋಬರ್ 2ನೇ ತಾರೀಕು. ನನಗೆ ಗಾಂಧಿಯವರ ಬಗ್ಗೆ ಮಾತಾಡಲು ಹೇಳಲಾಗಿತ್ತು. ಆ ಸಭಾಂಗಣದ ಹಿಂಭಾಗದಲ್ಲಿ ಕುಳಿತಿದ್ದ ನಾಗಭೂಷಣರು ಕನ್ನಡದಲ್ಲಿ ಪ್ರಶ್ನೆಯೊಂದನ್ನು ಕೇಳಲು ಪ್ರಯತ್ನಿಸುತ್ತಿದ್ದರು. ಅದನ್ನು ನನಗಾಗಿ ಇಂಗ್ಲಿಷಿಗೆ ಭಾಷಾಂತರಿಸಲಾಯಿತು. ಅದಕ್ಕೆ ಉತ್ತರವನ್ನೂ ಕೊಟ್ಟೆನು. ಆದರೆ ನನ್ನ ಉತ್ತರದಿಂದ ಅವರು ತೃಪ್ತರಾಗಲಿಲ್ಲ. ಅವರು ಇನ್ನೊಂದು ಪ್ರಶ್ನೆಯನ್ನು ಕೇಳಿದರು. ನಾನು ಉತ್ತರಿಸಲು ಪ್ರಯತ್ನಿಸಿದೆ. ಆದರೆ ಭಾಷಾಂತರದಲ್ಲಿ ಏನೋ ಕಳೆದುಹೋಗಿರಬಹುದು. ನಾನು ಜೋಗ ಜಲಪಾತ ನೋಡಿಕೊಂಡು ಶಿವಮೊಗ್ಗಕ್ಕೆ ಬಂದು, ಬೆಂಗಳೂರಿಗೆ ವಾಪಸಾದೆ. ಆಗ ನನ್ನ ಇ–ಮೇಲ್ ನಲ್ಲಿ ಒಂದು ಉದ್ದವಾದ ಪ್ರಶ್ನಾವಳಿಯೇ ನನಗಾಗಿ ಕಾದು ಕುಳಿತಿತ್ತು. ಆ ಮೈಲ್ ನಲ್ಲಿ ತಮ್ಮನ್ನು ಡಿ.ಎಸ್. ನಾಗಭೂಷಣ ಎಂದು ಪರಿಚಯಿಸಿಕೊಂಡಿದ್ದರು. ಹೀಗೆಯೇ ಕೆಲವು ವಾರಗಳು ನಮ್ಮಿಬ್ಬರ ನಡುವೆ ಗಾಂಧೀಯವರ ಬಗ್ಗೆ ತೀವ್ರವಾದ ವಾಗ್ವಾದಗಳ ಇ–ಮೈಲ್ ಪತ್ರವ್ಯವಹಾರವೇ ನಡೆಯಿತು. ನಾಗಭೂಷಣರು ಹೆಗ್ಗೋಡಿನಲ್ಲಿ ನಾನು ಆಡಿದ ಮಾತುಗಳ ಬಗ್ಗೆ ಅಸಮಾಧಾನ ಗೊಂಡಿದ್ದರು. ಗಾಂಧಿಯವರ ಸಮಾಜವಾದಿ ಸಹಚರರೊಂದಿಗಿನ ಸಂಪರ್ಕ /ಸಂವಾದದದ ಕುರಿತು ನಾನು ಹೆಚ್ಚು ಗಮನವನ್ನು ನೀಡಿರಲಿಲ್ಲ ಎಂಬುದಾಗಿತ್ತು ನಮ್ಮ ವಾಗ್ವಾದದ ತಿರುಳು. ನಾಗಭೂಷಣ ಅವರು ನೇರವಾಗಿ ಮತ್ತು ಕಟುವಾಗಿ ಮಾತಾಡುವವರಾಗಿದ್ದರು ಮತ್ತು ವಿಷಯವನ್ನು ತರ್ಕಪೂರ್ಣ ವಿಮರ್ಶೆಗೆ ಒಳಪಡಿಸುವಂತಹ ಮನೋಭಾವದವರಾಗಿದ್ದರು. ನನ್ನದೂ ಇದೇ ರೀತಿ. ನನಗೆ ಕೃತಕವಾಗಿ ಸೌಜನ್ಯ ತೋರಿಸುವುದರಲ್ಲಿ ನಂಬಿಕೆ ಇಲ್ಲ. ನನ್ನ ಅಂಕಣಗಳಲ್ಲಿ ಈಗಿನ ಪ್ರಧಾನಿ ಮತ್ತು ಕಾಂಗ್ರೆಸ್ ನಾಯಕರ ಕುರಿತು ಬರೆಯುವುದನ್ನು ಗಮನಿಸಿದರೆ ನಿಮಗಿದು ಅರಿವಾಗುತ್ತದೆ. ನಾನು ಅವರನ್ನು ಟೀಕಿಸುತ್ತೇನೆ, ಆದರೆ ನಾನು ಅವರ ಕುರಿತು ಆಕ್ರಮಣಕಾರಿಯಾಗಿ ಬರೆಯುವುದಿಲ್ಲ. ನಾನು ನೇರವಾಗಿಯೇ ಬರೆಯುತ್ತೇನೆ. ನಾಗಭೂಷಣ ಅವರೂ ಸಹ ಹಾಗೆಯೇ ಇದ್ದರು. ನನ್ನ ಅನುಮತಿಯನ್ನು ಪಡೆದು ನಮ್ಮ ಇಡೀ ಆನ್ ಲೈನ್ ವಿಚಾರವಿನಿಮಯದ ಸಂಭಾಷಣೆಯನ್ನು ಕನ್ನಡಕ್ಕೆ ಭಾಷಾಂತರಿಸಿದರು. ಆಮೇಲೆ ನಾಗಭೂಷಣ ಅವರು ಈ ಅದ್ಭುತ ಪುಸ್ತಕ 'ಗಾಂಧಿ ಕಥನ' ವನ್ನು ಬರೆಯುತ್ತಿದ್ದಾಗ ಅದರ ಕುರಿತು ನಮ್ಮೊಳಗೆ ಮತ್ತಷ್ಟು ವಿಚಾರವಿನಿಮಯ ಬೆಂಗಳೂರಿನಲ್ಲಿ ಗಾಂಧಿಭವನದಲ್ಲಿ ನಡೆಯಿತು. ಈ ಪುಸ್ತಕದ ಮೊದಲಮುದ್ರಣದ ಬಿಡುಗಡೆ ಸಮಾರಂಭದಲ್ಲಿ ನಾನು ಭಾಗವಹಿಸಬೇಕೆಂದು ಅವರು

ಬಯಸಿದ್ದರು. ಅದು ನನಗೆ ಬಹಳ ಗೌರವದ ವಿಷಯವಾಗಿತ್ತು. ಖಂಡಿತವಾಗಿಯೂ ನನಗೆ ಕನ್ನಡವನ್ನು ಓದಲು ಬರುವುದಿಲ್ಲ. ಈ ಪುಸ್ತಕದ ಪ್ರಕಾಶಕರು ಈ ಪುಸ್ತಕವನ್ನು ನಾನು ಓದಲು ಸಾಧ್ಯವಾಗುವಂತೆ ಹಿಂದಿ ಅಥವಾ ಇಂಗ್ಲಿಷಿಗೆ ಭಾಷಾಂತರಿಸುವ ವ್ಯವಸ್ಥೆ ಮಾಡುವರೆಂದು ಆಶಿಸುತ್ತೇನೆ. ಈ ಪುಸ್ತಕದ ಬಗ್ಗೆ ನನ್ನ ಸ್ನೇಹಿತರು ಮತ್ತು ಸಹೋದ್ಯೋಗಿಗಳೊಂದಿಗೆ ಮಾತನಾಡಿದಾಗ ಇದೊಂದು ಮಹತ್ವದ, ವಿದ್ವತ್ಪೂರ್ಣವಾದ ಮತ್ತು ಸೃಜನಶೀಲವಾದ ಕೃತಿ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಉತ್ತಮ ಸಂವಹನ ಸಾಮರ್ಥ್ಯ ಹೊಂದಿರುವ ನಾಗಭೂಷಣರಿಂದ ಮಾತ್ರ ಇಂತಹ ಕೃತಿಯನ್ನು ನಿರೀಕ್ಷಿಸಲು ಸಾಧ್ಯ. ನಾನು ಈ ಪುಸ್ತಕವನ್ನು ಓದದೇ ಇರುವುದರಿಂದ ನಾಗಭೂಷಣ ಅವರು ತಮ್ಮ ಪುಸ್ತಕದಲ್ಲಿ ಹೇಳಿರಬಹುದಾದ ಕೆಲವು ವಿಚಾರಗಳು– ಗಾಂಧಿಯವರ ಜೀವನದ ಬಗ್ಗೆ ಅಲ್ಲ, ಗಾಂಧಿಯವರ ಜೀವನದ ಪುರಾಣಕಥನದ ಪಾಠಗಳ ಬಗ್ಗೆ– ನನ್ನ ಮಾತುಗಳಲ್ಲಿ ಪ್ರತಿಫಲನಗೊಳ್ಳಬಹುದು ಎಂದು ಅಂದುಕೊಂಡಿದ್ದೇನೆ. 2023 ರ ಜನವರಿ 30ಕ್ಕೆ ಧರ್ಮಾಂಧನೊಬ್ಬನ ಕೈಗಳಿಂದ ಗಾಂಧಿಯವರ ಹತ್ಯೆ ನಡೆದ 75ನೇ ವರ್ಷದ ಆಚರಣೆಯನ್ನು, ಆಚರಣೆಯಲ್ಲ– ನೆನಪಿಸಿಕೊಳ್ಳುವುದನ್ನು ಮಾಡುತ್ತೇವೆ. ಗಾಂಧಿ ಹುಟ್ಟಿ 150 ವರ್ಷಗಳಿಗಿಂತಲೂ ಹೆಚ್ಚಾಗಿದೆ. ನೀವು ಬಲ್ಲಂತೆ ಹೆಚ್ಚಿನವರು ಗಾಂಧಿಯನ್ನು ಇಷ್ಟಪಡುತ್ತಾರೆ. ಅವರೊಬ್ಬ ವಿಶ್ವಮಾನವ/ಸಾರ್ವಜನಿಕ ಮನುಷ್ಯ. ಕೆಲವರು ಅವರನ್ನು ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರಿಗೆ ಹೋಲಿಸಿದರೆ, ನಾನು ಮತ್ತೂ ಮುಂದೆ ಹೋಗಿ ಅವರನ್ನು ಬುದ್ಧನಿಗೆ ಹೋಲಿಸುತ್ತೇನೆ. ಬುದ್ಧ ಮತ್ತು ಗಾಂಧಿಯ ಕುರಿತು, ಅವರ ವ್ಯಕ್ತಿತ್ವ ಹೇಗೆ ರೂಪಾಂತರಗೊಂಡಿತು ಎಂಬ ಬಗ್ಗೆ ಒಂದು ವಿಶಿಷ್ಟವಾದ ಹೋಲಿಕೆಯನ್ನು ಆಮೇಲೆ ನಾನು ನೀಡುತ್ತೇನೆ.



ನನ್ನ ಈ ಪ್ರಸ್ತುತಿಯಲ್ಲಿ ಗಾಂಧಿ ಇಂದಿಗೂ ಏಕೆ ಮುಖ್ಯರು ಎಂಬ ಕುರಿತು ಹತ್ತು ಕಾರಣಗಳನ್ನು ತಿಳಿಸಬಯಸುತ್ತೇನೆ. ನಾವು, ಮಾನವ ಜನಾಂಗದ ಸದಸ್ಯರೆಲ್ಲಾ ಗಾಂಧಿಯನ್ನು ಈ ಕಾರಣಗಳಿಗಾಗಿ ನೆನಪಿಸಿಕೊಳ್ಳಲೇಬೇಕು.

ಗಾಂಧಿ ಏಕೆ ಇಂದಿಗೂ ಪ್ರಸ್ತುತ ಎಂಬುದಕ್ಕೆ ಮೊದಲ ಕಾರಣವೆಂದರೆ ಅವರು ಭಾರತಕ್ಕೆ ಮತ್ತು ವಿಶ್ವಕ್ಕೇ ಒಂದು ಮಾದರಿಯನ್ನು ಕೊಟ್ಟಿದ್ದಾರೆ, ಅದೇನೆಂದರೆ ಬಲಪ್ರಯೋಗವಿಲ್ಲದೇ ಅಥವಾ ಸಾವು–ನೋವಿಗೆ ಅವಕಾಶ ನೀಡದಂತೆ ಪ್ರತಿರೋಧ ಒಡ್ಡುವುದು. ಅನ್ಯಾಯ ಎಲ್ಲಿ ಕಾಣುತ್ತದೆಯೋ, ನ್ಯಾಯಯುತವಲ್ಲದ ಅಧಿಕಾರದ ಪ್ರಯೋಗ ಕಾಣುತ್ತದೆಯೋ ಅದನ್ನು ಸಿಟ್ಟು ಮತ್ತು ಹಿಂಸೆಯ ಮೂಲಕ ಪ್ರತಿಭಟಿಸುವುದು, ಲೆನಿನ್, ಸ್ಟಾಲಿನ್, ಮಾವೋ ಮತ್ತು ಹೋಚಿ ಮಿನ್ ಅವರ ಆಯುಧವಾಗಿತ್ತು. ಆದರೆ ಗಾಂಧಿ ಇದಕ್ಕೆ ಸ್ವತಃ ತಮ್ಮ ಉಪಸ್ಥಿತಿಯ ಮೂಲಕ ಅಹಿಂಸಾ ಸತ್ಯಾಗ್ರಹ ನಡೆಸುವ ಬೇರೆಯೇ ಮಾದರಿಯನ್ನು ಹೇಳಿಕೊಟ್ಟರು. ನಮ್ಮ ಈಗಿನ ಆಡಳಿತಶಾಹಿಗೆ ಅವಮಾನವಾಗುವಂತಹ/ನಾಚಿಕೆಯಾಗುವ ಂತಹ ರೀತಿಯಲ್ಲಿ ದೆಹಲಿಯ ಹೊರವಲಯದಲ್ಲಿ ರೈತರು ಪ್ರತಿಭಟನೆ ನಡೆಸಿದರು, ಯಾಕೆಂದರೆ ಅದು ಅಹಿಂಸಾ ಮಾರ್ಗದ ಸತ್ಯಾಗ್ರಹವಾಗಿತ್ತು. ಅವರು ಅಹಿಂಸಾಮಾರ್ಗದಲ್ಲಿಯೇ ತಮ್ಮ ಒಗ್ಗಟ್ಟನ್ನು ಪ್ರದರ್ಶಿಸಿದ್ದರು, ಸತ್ಯಾಗ್ರಹ ಎಂಬುದು ನ್ಯಾಯಯುತವಲ್ಲದ ಅಧಿಕಾರದ ವಿರುದ್ಧ ಗಾಂಧಿ ರೂಪಿಸಿದ ಅಹಿಂಸಾ ಪ್ರತಿಭಟನೆ, ಅದನ್ನೇ ಗಾಂಧಿ ಸತ್ಯಾಗ್ರಹ ಎಂದು ಹೆಸರಿಸಿರುವುದು. ಹಿಂಸಾತ್ಮಕ ಕ್ರಾಂತಿಗೆ ಅದೇ ಪರ್ಯಾಯ ವಿಧಾನ, ಹಾಗೆಯೇ ಒಪ್ಪಿಕೊಳ್ಳುವುದು, ಸಾತ್ವಿಕವಾಗಿ ಒಪ್ಪಿಕೊಳ್ಳುವುದು .'ಹಮಾರೇ ಯೇ ಸ್ಥಿತಿ ಹೈ, ಹಮ್ ಕುಚ್ ನಹೀ ಕರ್ ಸಕ್ತೇ ಹೈ' ಪರಿಸ್ಥಿತಿ ಹೀಗಿದೆ, ಆದರೆ ನಾವೇನೂ ಮಾಡಲಾರೆವು., ಯಥಾಸ್ಥಿತಿಯನ್ನು ಬದಲಾಯಿಸುವುದಕ್ಕೆ ಹಿಂಸೆಯ ಬದಲಾಗಿ ಪರ್ಯಾಯ ಮಾರ್ಗವು ಇದುವೇ ಆಗಿದೆ ಭಾರತದಲ್ಲಿ ಇಂದಿಗೂ ಒಂದು ಮಟ್ಟದ ಪ್ರಜಾಪ್ರಭುತ್ವ ಉಳಿದಿರಲು ಕಾರಣ ಗಾಂಧಿಯ ಅಹಿಂಸಾ ಮಾರ್ಗದ ಈ ಪರಂಪರೆಯೇ. ಏಷ್ಯಾ ಮತ್ತು ಆಫ್ರಿಕಾದ ದೇಶಗಳಲ್ಲಿ ಎಲ್ಲೆಲ್ಲಿ ಹಿಂಸೆಯ ಮೂಲಕ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲಾಯಿತೋ ಅವೆಲ್ಲಾ ಕೊನೆಗೂ ಸರ್ವಾಧಿಕಾರದ ಆಡಳಿತದಲ್ಲೇ ಅಂತ್ಯಗೊಂಡಿವೆ. ಪ್ರಪಂಚದಾದ್ಯಂತ 'ಸತ್ಯಾಗ್ರಹ' ಬೀರಿದ ಅಸಾಧಾರಣ ಪ್ರಭಾವವನ್ನು ನೀವು ಒಮ್ಮೆ ಗಮನಿಸಿದರೆ ಅಮೆರಿಕಾದಲ್ಲಿ ನಾಗರಿಕ ಹಕ್ಕುಗಳಿಗಾಗಿ ಮಾರ್ಟಿನ್ ಲೂಥರ್ ಕಿಂಗ್ ಕೈಗೊಂಡ ಬಹಳ ಪ್ರಖ್ಯಾತವಾದ ಹೋರಾಟ, ಅಲ್ಲಿ ಜನಾಂಗೀಯ ಪೂರ್ವಗ್ರಹಪೀಡಿತ ಕಾನೂನುಗಳು 'ಸತ್ಯಾಗ್ರಹ' ದ ಮೂಲಕ ಬದಲಾವಣೆಗೊಂಡಿರುವುದನ್ನು ನೋಡಬಹುದು. ಸೋವಿಯೆತ್ ರಶ್ಯಾದಲ್ಲಿಯೂ ಕಮ್ಯೂನಿಸ್ಟ್ ಆಡಳಿತದ ವಿರುದ್ಧ ಸತ್ಯಾಗ್ರಹದ ಮಾದರಿ ಪ್ರಮುಖವಾದ ಪಾತ್ರವನ್ನು ವಹಿಸಿದೆ. ಪೋಲೆಂಡ್ ನಲ್ಲಿ ಆಳುವ ಸರ್ಕಾರದ ವಿರುದ್ಧ ಟ್ರೇಡ್ ಯೂನಿಯನ್ ಕೈಗೊಂಡ Solidarity Movement ಸತ್ಯಾಗ್ರಹದ ವಿಧಾನವನ್ನೇ ಅನುಸರಿಸಿತ್ತು. ಜಕೋಸ್ಲಾವಾಕಿಯಾದಲ್ಲಿ ಗಾಂಧಿಯ ಅಭಿಮಾನಿಯಾಗಿದ್ದ ಭಿನ್ನಮತೀಯ ನಾಯಕರಾಗಿದ್ದ ವಾಕ್ಲಾವ್ ಹ್ಯಾವೆಲ್ ಅವರು 'ಅಹಿಂಸಾ ಸತ್ಯಾಗ್ರಹ' ನಮಗೆ ನೀಡುವಂತಹ ಶಕ್ತಿಯ ಬಗ್ಗೆ ಮಾತನ್ನಾಡಿದ್ದಾರೆ. ಗಾಂಧಿ ಯಾಕೆ ಇಂದಿಗೂ ಮುಖ್ಯ ಎನ್ನುವುದಕ್ಕೆ ಇದು ಮೊದಲ ಕಾರಣ. ನಮ್ಮ ಹಕ್ಕುಗಳಿಗಾಗಿ ಎದ್ದು ನಿಲ್ಲುವುದು, ದಮನಕಾರಿಯಾದ ಅನ್ಯಾಯದ ವಿರುದ್ಧ ಪ್ರತಿಭಟಿಸುವುದು, ದಬ್ಬಾಳಿಕೆ ಮಾಡುವವರ ವಿರುದ್ಧ ಹಿಂಸೆಯನ್ನು ಮಾಡದಿರುವುದು, ಸ್ವತಃ ನೋವು ಅನುಭವಿಸುವುದರ ಮೂಲಕ ನಮ್ಮನ್ನು ತುಳಿಯುತ್ತಿರುವವರೇ ನಾಚಿಕೊಳ್ಳುವಂತೆ ಮಾಡುವುದು, ಆ ಮೂಲಕ ದಬ್ಬಾಳಿಕೆ ನಡೆಸುತ್ತಿರುವವರಿಗೇ ಅನ್ಯಾಯ ನಡೆಯುತ್ತಿರುವುದರ ಬಗ್ಗೆ ಅರಿವು ಮೂಡಿಸುವುದು. (ದೆಹಲಿಯ ಹೊರವಲಯದಲ್ಲಿ) ಕೃಷಿ ಕಾಯ್ದೆ ವಿರೋಧಿಸಿ ನಡೆದ ರೈತರ ಚಳುವಳಿ, ಮತ್ತು ಶಾಹೀನ್ ಬಾಗ್ ನಲ್ಲಿ ನಡೆದ ಮಹಿಳೆಯರ ಚಳುವಳಿಗಳು, ಧೈರ್ಯದಿಂದ ನಡೆಸಿದ ಈ ಪ್ರತಿರೋಧ, ಅಹಿಂಸಾ ಸತ್ಯಾಗ್ರಹ ಇಂದಿಗೂ ನಮ್ಮ ದೇಶದಲ್ಲಿ ಅದೆಷ್ಟು ಪ್ರಸ್ತುತ ಎಂಬುದನ್ನು ಹೇಳುತ್ತಿದೆ.

ಗಾಂಧಿ ಇಂದಿಗೂ ಯಾಕೆ ಮಹತ್ವ ಪಡೆದುಕೊಂಡಿದ್ದಾರೆ ಎಂಬುದಕ್ಕೆ ಎರಡನೆಯ ಕಾರಣ– ನೀವು ದೇಶಭಕ್ತರಾಗಬೇಕು, ರಾಷ್ಟ್ರಧ್ವಜವನ್ನು ನೋಡಿದರೆ ಎದ್ದು ನಿಂತು ಗೌರವ ಸೂಚಿಸಬೇಕು ಎಂಬುದನ್ನು ಹೇರಿಕೆ ಮಾಡುತ್ತಿರುವುದು, ಕರ್ನಾಟಕದಲ್ಲಂತೂ ವೇದಿಕೆಗೆ ಹೋಗಬೇಕೆಂದರೆ ನಿಮ್ಮ ಶೂ ಕಳಚಿ ಹೋಗಬೇಕು, ಕೆಲವೊಮ್ಮೆ ನಿಮ್ಮ ಧಾರ್ಮಿಕ ಗುರುತನ್ನು ತೋರಿಸಬೇಕು, ಹೆಮ್ಮೆಯಿಂದ ಹೇಳಿರಿ 'ನೀವು ಹಿಂದೂ' ಎಂದು ಇತ್ಯಾದಿಗಳನ್ನು ನಮ್ಮ ಮೇಲೆ ಹೇರುತ್ತಿರುವುದು. ಗಾಂಧಿ ನಮ್ಮ ದೇಶದ ಸಂಸ್ಕೃತಿಯನ್ನು ಪ್ರೀತಿಸಿದವರು, ಅವರೊಬ್ಬ ಹಿಂದೂ ಮತ್ತು ಈ ದೇಶವನ್ನು ಪ್ರೀತಿಸುವವರು ಆಗಿದ್ದರು. ಅವರೊಬ್ಬ ಭಾರತೀಯ. ಅವರ ಕಾಲದ ದೇಶದ ಸಂಸ್ಕೃತಿ ದೋಷರಹಿತವಾದದ್ದೆಂದು ಅವರು ತಿಳಿದಿರಲಿಲ್ಲ, ಗಾಂಧಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ್ದರು, ಅದರೊಂದಿಗೆ ಭಾರತೀಯರಿಗಾಗಿಯೂ ಹೋರಾಟ ನಡೆಸಿದ್ದರು. ಅವರು ತಮ್ಮ ಹೋರಾಟ ದಬ್ಬಾಳಿಕೆ ನಡೆಸುವವರ ವಿರುದ್ಧ ಮಾತ್ರವಾಗಿರಲಿಲ್ಲ. ಸಾಮಾಜಿಕ ಅನಿಷ್ಟಗಳನ್ನು ಕಡಿಮೆ ಮಾಡುವುದಕ್ಕಾಗಿಯೂ– ವಿಶೇಷವಾಗಿ ದಲಿತರು ಮತ್ತು ಮಹಿಳೆಯರ ವಿರುದ್ಧ ತಾರತಮ್ಯ ಮಾಡುವಂತಹ ಸಾಮಾಜಿಕ ಅನಿಷ್ಟವನ್ನು ತೊಡೆದುಹಾಕಲು ಅವರು ಶ್ರಮಿಸಿದ್ದರು. ಏಕೆಂದರೆ ಇವೆಲ್ಲಾ ಭಾರತೀಯ ಸಂಸ್ಕೃತಿಯ ಭಾಗವಾಗಿದ್ದವು. ಹಿಂದೂ ಸಂಸ್ಕೃತಿಯ ಭಾಗವಾಗಿದ್ದವು. ಇವೆಲ್ಲಾ ಅಸಮಾನತೆ ಮತ್ತು ಶ್ರೇಣೀಕರಣದ ವ್ಯವಸ್ಥೆಯ ಅತ್ಯಂತ ಅಪಾಯಕಾರಿ ಅಂಶಗಳಾಗಿದ್ದವು. ಜಾತಿವ್ಯವಸ್ಥೆಯನ್ನು ಹುಟ್ಟುಹಾಕಿದವನು ಅತ್ಯಂತ ದುಷ್ಟ ಮತ್ತು ಕೇಡಿನ ಮನಸ್ಸು ಹೊಂದಿದವನೆಂದೇ ಹೇಳಬೇಕು. ಆತ ಅತ್ಯಂತ ಬುದ್ಧಿವಂತನೇ ಇರಬಹುದು ಆದರೆ ದುಷ್ಟನೂ ಹೌದು, ಯಾರೋ ಒಬ್ಬ ಪಂಡಿತನೋ, ಶಾಸ್ತ್ರಿಯೋ ಜಾತಿವ್ಯವಸ್ಥೆ ಹುಟ್ಟುಹಾಕಿರಬಹುದು, ಆದರೆ ಜಾತಿವ್ಯವಸ್ಥೆಯನ್ನು ಇಂಡಿಯಾದಲ್ಲಿ ಮುಸ್ಲಿಮರು, ಸಿಕ್ಖರು, ಕ್ರಿಶ್ಚಿಯನ್ನರೂ ಪಾಲಿಸುತ್ತಾರೆ, ಇದು ಮಾತ್ರ ಬಹಳ ದಿಗ್ಭ್ರಮೆಗೊಳಿಸುವ ಸಂಗತಿಯೇ ಸರಿ.

ಗಾಂಧಿ ತಮ್ಮ ಜೀವನಪರ್ಯಂತ ಅಸ್ಪೃಶ್ಯತೆಯನ್ನು ಹೋಗಲಾಡಿಸುವುದರಲ್ಲೇ ತೊಡಗಿಕೊಂಡಿದ್ದರು. ಮತ್ತು ತಮ್ಮದೇ ಆದ ರೀತಿಯಲ್ಲಿ ಮಹಿಳೆಯರ ವಿಮೋಚನೆಗಾಗಿಯೂ ಹೋರಾಟ ನಡೆಸಿದ್ದರು. ಅವರು ಅಂತಹ ಪೂರ್ಣಪ್ರಮಾಣದ ಸ್ತ್ರೀವಾದಿಯಾಗಿರಲಿಲ್ಲ. ಅದರಲ್ಲೂ 2020–22ರ ಮಾನದಂಡದಲ್ಲಂತೂ ಅಲ್ಲ. ಮಹಿಳೆಯರ ಹಕ್ಕುಗಳಿಗಾಗಿ ಜವಾಹರ್ ಲಾಲ್ ನೆಹರೂ ಅವರು ಮುಂದಿಟ್ಟ ಪ್ರಸ್ತಾವನೆಯಲ್ಲಿ ಗಾಂಧಿಯವರಿಗಿಂತ ತುಸು ಹೆಚ್ಚೇ ಅವರು ಸ್ತ್ರೀವಾದಿಯಾಗಿರುವುದನ್ನು ನೋಡಬಹುದಿತ್ತು. ಅದರಲ್ಲಿ ಮುಖ್ಯವಾದುದು ಸಾರ್ವತ್ರಿಕ ಮತದಾನದ ಹಕ್ಕುಗಳು. ಜಗತ್ತಿನಲ್ಲಿ ಮೊದಲ ಚುನಾವಣೆಯಲ್ಲಿಯೇ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿದಂತಹ ದೇಶ ಇಂಡಿಯಾ. ಅದಕ್ಕೆ ನೆಹರೂ ಅವರು ಭಾಗಶಃ ಕಾರಣರು, ಅಂಬೇಡ್ಕರ್ ಸಹ ಪ್ರಖರ ಸ್ತ್ರೀವಾದಿ. ಅವರು ಹಿಂದೂ ವೈಯಕ್ತಿಕ ಕಾನೂನಿಗೆ ಹಲವು ಸುಧಾರಣೆಗಳನ್ನು ತಂದರು. ಆ ಮಟ್ಟಕ್ಕೆ ಗಾಂಧಿ ಸ್ತ್ರೀವಾದಿಯಾಗಿರಲಿಲ್ಲ. ಆದರೆ ಬೇರೆಯವರಿಗೆ ಹೋಲಿಸಿದರೆ ಬಾಂಬೆ ಪ್ರೆಸಿಡೆನ್ಸಿಯ ಸ್ವಾತಂತ್ರ್ಯ ಹೋರಾಟದಲ್ಲಿ ಆ ಕಾಲದಲ್ಲಿ ಮಹಿಳೆಯರು ಭಾಗವಹಿಸುವಂತೆ ಮಾಡಿದ್ದರು. ವಿಶೇಷವಾಗಿ 1930–40 ರಲ್ಲಿ ಸಾವಿರಾರು ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ರಶ್ಯನ್ ಕ್ರಾಂತಿಯಲ್ಲಿಯೂ ಮಹಿಳೆಯರು ಭಾಗವಹಿಸಿರಲಿಲ್ಲವೆಂಬುದನ್ನು ಗಮನಿಸಬಹುದು. ಅಲ್ಲಿ ಮಹಿಳೆಯರ ಭಾಗವಹಿಸುವಿಕೆ ಇರಲೇ ಇಲ್ಲವೆನ್ನಬಹುದು. ಚೀನಾದ ಕ್ರಾಂತಿಯಲ್ಲಿ, ಮಾವೋ ಹೋರಾಟದಲ್ಲಿ ಮಾವೋ ಅವರ ಪತ್ನಿ ಮತ್ತಿತರ ಕೆಲವರನ್ನು ಬಿಟ್ಟರೆ ಮಹಿಳೆಯರ ಭಾಗವಹಿಸುವಿಕೆ ಇಲ್ಲವೇ ಇಲ್ಲವೆನ್ನಬಹುದು. ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಸಾಮೂಹಿಕ ಭಾಗವಹಿಸುವಿಕೆಯೆನ್ನುವುದು ಭಾರತದ್ದೇ ವಿಶೇಷ ವಿದ್ಯಮಾನ. ಕಮಲಾದೇವಿ ಚಟ್ಟೋಪಾಧ್ಯಾಯ,–ಅವರು ನಮ್ಮವರೇ– ಕನ್ನಡದವರೇ– ಅವರ ಚಟುವಟಿಕೆಗಳಿಂದಾಗಿ ಮಹಿಳೆಯರ ಭಾಗವಹಿಸುವಿಕೆ ಸಾಧ್ಯವಾಯಿತು. 1930ರಲ್ಲಿ ಉಪ್ಪಿನ ಸತ್ಯಾಗ್ರಹ ಪ್ರಾರಂಭವಾದಾಗ ಗಾಂಧಿಯವರೊಂದಿಗೆ ಎಪ್ಪತ್ತೆಂಟು ಜನರಿದ್ದರು. ಗಾಂಧಿ ದಂಡಿಯ ಕಡೆ ಯಾತ್ರೆ ಹೊರಟಿದ್ದರೆ ಇಲ್ಲಿ ರಾಜಾಜಿ ವೇದಾರಣ್ಯದ ಕಡೆ ಉಪ್ಪಿನ ಸತ್ಯಾಗ್ರಹಕ್ಕೆ ಯಾತ್ರೆ ಕೈಗೊಂಡಿದ್ದರು. ಅವರೆಲ್ಲರೂ ಗಂಡಸರು. ಕಮಲಾದೇವಿ ಗಾಂಧಿಯವರ ಬಳಿ ಹೋಗಿ ತಾವೂ ಉಪ್ಪು ತಯಾರಿಸುವುದಾಗಿ ಹೇಳಿದರು. ಗಾಂಧಿ ಬೇಡವೆಂದರು. ಮಹಿಳೆಯರ ಕೆಲಸ ಪಿಕೆಟಿಂಗ್ ನಡೆಸುವುದು ಮಾತ್ರ ಎಂದರು. ಕಮಲಾದೇವಿ ತಾನು ಭಾಗಿಯಾಗುವುದಾಗಿ ಒತ್ತಾಯಿಸಿದರು. ದಾದಾಬಾಯಿ ನವರೋಜಿಯವರ ಮೊಮ್ಮಗಳು ಅವರನ್ನು ಹಿಂಬಾಲಿಸಿದರು. ಇದು ಬಹಳ ವಿಶೇಷ ಸಂಗತಿ. ಆಮೇಲೆ ಸರೋಜಿನಿ ನಾಯ್ಡು ಅವರೂ ಭಾಗವಹಿಸಿದರು. ಆಮೇಲೆ ಸುಮಾರು ಡಜನ್ನುಗಟ್ಟಲೇ ಹೆಂಗಸರು ಬಂಧಿತರಾದರು. 1942 ರ ಚಳುವಳಿಯಲ್ಲಿ ಹತ್ತುಸಾವಿರಗಟ್ಟಲೆ ಮಹಿಳೆಯರು ಭಾಗವಹಿಸಿದ್ದರು. ಇವೆಲ್ಲಾ ಗಾಂಧಿಯವರ ಜೀವನ ಚರಿತ್ರೆಯ ಎರಡನೆಯ ವಾಲ್ಯೂಂ **'Gandhi the Years that Changed the World** ನಲ್ಲಿ ಬರುತ್ತದೆ. ನಾನು 1942 ರ ಚಳುವಳಿ ಬಗ್ಗೆ ಧಾರವಾಡದಲ್ಲಿ ಮಾತನಾಡಿದಾಗ ಸಣ್ಣ ವಯಸ್ಸಿನ ಕಾಲೇಜು ವಿದ್ಯಾರ್ಥಿನಿಯೊಬ್ಬಳು– ಅವಳ ಹೆಸರು ಶಿರೋಡ್ಕರ್ ಪ್ರಿನ್ಸಿಪಾಲರ ಹತ್ತಿರ ಹೋಗಿ



ನಾವು ಒಂದು ಮಹತ್ತರವಾದ ವಿಷಯದ ಬಗ್ಗೆ ಈ ರೀತಿ ಚಳುವಳಿ ಮಾಡುವೆವು, ನೀವು ನಮ್ಮನ್ನು ಬಂಧನಕ್ಕೊಳಪಡಿಸಬಹುದು, ಅದರ ಬಗ್ಗೆ ನಮಗೇನೂ ಭಯವಿಲ್ಲ ಎಂದು ಹೇಳಿದಳು.

ಅದೆಲ್ಲಾ ಇರಲಿ, ಗಾಂಧಿ ಮಹಿಳೆಯರು ಸಾರ್ವಜನಿಕ ಜೀವನದಲ್ಲಿ ಪಾಲ್ಗೊಳ್ಳುವುದನ್ನು ಪ್ರೋತ್ಸಾಹಿಸಿದರು. ಗಾಂಧಿ ವಿನಾಶಕಾರಿಯಾದ ಅಸ್ಪೃಶ್ಯತಾ ಪದ್ಧತಿಯನ್ನು ವಿರೋಧಿಸಿದರು. ದಲಿತರು ಮತ್ತು ಮಹಿಳೆಯರ ಕುರಿತು ತಾರತಮ್ಯ ಮಾಡುವುದನ್ನು ಗಮನಿಸಿ ಇದು ಹಿಂದೂಗಳಿಗೆ ಮತ್ತು ಭಾರತೀಯರಿಗೆ ನಾಚಿಕೆಯಾಗುವಂತಹ ಸಂಗತಿ, ಇದರ ಬಗ್ಗೆ ಅರಿವಿರದಿದ್ದರೆ ನಿಮ್ಮ ಸಂಸ್ಕೃತಿ, ಸಮುದಾಯ, ಧರ್ಮ, ನಿಮ್ಮ ಗ್ರಾಮ, ನಿಮ್ಮ ದೇಶ ಇವನ್ನೆಲ್ಲಾ ಎಷ್ಟೇ ಪ್ರೀತಿಸಬಹುದು, ಆದರೆ ಅಂತಹ ದೇಶಕ್ಕೆ ಇದೊಂದು ಕಳಂಕ ತರುವಂತಹ ಸಂಗತಿ, ಈ ರೀತಿ ಧರ್ಮದ ಹೆಸರಿನಲ್ಲಿ ತಾರತಮ್ಯ ಮಾಡುವುದು. ಬ್ರಿಟಿಷರು ಮಾತ್ರ ದಮನ ಮಾಡುತ್ತಿರುವುದಲ್ಲ, ಒಂದು ಗುಂಪಿನ ಭಾರತೀಯರು ಇನ್ನೊಂದು ಗುಂಪಿನ ಭಾರತೀಯರ ಮೇಲೆ ದಬ್ಬಾಳಿಕೆ ಮಾಡುತ್ತಿರುವುದು ಎಂದರು.

ಮೂರನೆಯ ಕಾರಣ, ಗಾಂಧಿ ಹಿಂದೂ ಧರ್ಮದ ಆಚರಣೆಯನ್ನು ಪಾಲಿಸುತ್ತಿರುವವರು. ಅವರು ಧಾರ್ಮಿಕ ನಂಬಿಕೆಯ ಆಧಾರದ ಮೇಲೆ ಪೌರತ್ವನ್ನು ನಿರ್ಣಯಿಸುವುದನ್ನು ನಿರಾಕರಿಸಿದರು. ಗಾಂಧಿ ದೀರ್ಘ ಕಾಲ ಬಾಳಿದವರು. ಈ ಭೂಮಿಯಲ್ಲಿ ಬದುಕಿದ ಎಂಟು ದಶಕಗಳ ಕಾಲ ಬಹಳ ಮಹತ್ವದ ಕಾರ್ಯಗಳನ್ನೇ ಕೈಗೊಂಡರು. ಅವರ ಅತ್ಯಂತ ಮಹತ್ತರವಾದ ಕ್ಷಣಗಳೆಂದರೆ ಅವರ ಜೀವಿತಾವಧಿಯ ಕೊನೆಯ ಐದು ತಿಂಗಳುಗಳು. ಹಾಗೂ ಭಾರತದ ವಿಭಜನೆಯಾದ ನಂತರದ ದಿನಗಳು. ವಿಭಜನೆಯನ್ನು ತಡೆಯಲು ಪ್ರಯತ್ನಿಸಿದರು, ಆದರೆ ಅದರಲ್ಲಿ ಅವರಿಗೆ ಯಶಸ್ಸು ಸಿಗಲಿಲ್ಲ. ಮುಸ್ಲಿಮರಿಗೆ ಪಾಕಿಸ್ತಾನವೇ ತಾಯಿನಾಡಾಯಿತು. ಇದಕ್ಕೆ ಪ್ರತಿಯಾಗಿ ಭಾರತೀಯ ಮುಸ್ಲಿಮರ ವಿರುದ್ಧ ತಾರತಮ್ಯ ಮಾಡಬಾರದೆಂದು ಹೇಳಿದರು. ಪಾಕಿಸ್ತಾನದಲ್ಲಿ ಅಲ್ಪಸಂಖ್ಯಾತರ ಮೇಲೆ ಏನೇ ನಡೆದರೂ ಭಾರತ ಮಾತ್ರ ಆ ರೀತಿ ಮಾಡಲೇಬಾರದು ಎಂದರು. ಸೆಪ್ಟೆಂಬರ್ ಮೊದಲ ವಾರದಲ್ಲಿ ಏನಾಯಿತೆಂಬುದನ್ನು ನೀವೆಲ್ಲಾ ಇತಿಹಾಸದ ಪುಸ್ತಕಗಳಲ್ಲಿ ಓದಿರುತ್ತೀರಿ. 1947 ರ ಆಗಸ್ಟ್ ಹದಿನೈದರಂದು ಗಾಂಧಿ ಶೋಕಾಚರಣೆ ಮಾಡುತ್ತಿದ್ದರು. ಅವರು ಸ್ವಾತಂತ್ರ್ಯದ ಆಚರಣೆ ಮಾಡಲಿಲ್ಲ. ಏಕೆಂದರೆ ಸ್ವಾತಂತ್ರ್ಯ ಎಂಬುದು ಧರ್ಮದ ಕಾರಣಗಳಿಗಾಗಿ ರಕ್ತದ ಬೆಲೆ ತೆತ್ತು ಪಡೆದುದಾಗಿತ್ತು. ಕಲ್ಕತ್ತಾನಗರವು ಗಲಭೆಗಳ ಕೇಂದ್ರವಾಗಿತ್ತು. ವಿಭಜನೆಯ ಮೂರುವಾರಗಳ ನಂತರ ಗಾಂಧಿ ಕಲ್ಕತ್ತಾದಲ್ಲಿ ತಮ್ಮ ನೈತಿಕ ಬಲದ ಮೇಲೆ ತಮ್ಮ ಎಪ್ಪತ್ತೆಂಟರ ಇಳಿವಯಸ್ಸಿನಲ್ಲಿ ಗಲಭೆಗಳನ್ನು ವಿರೋಧಿಸಿ ಉಪವಾಸ ಕೂರುತ್ತಾರೆ. ತಮ್ಮ ನೈತಿಕ ಬಲದ ಮೇಲೆಯೇ ಗಲಭೆಗೆ ತುತ್ತಾದ ನಗರದಲ್ಲಿ ಶಾಂತಿಯನ್ನು ಸಾಧಿಸುತ್ತಾರೆ.

ಆಮೇಲೆ ಅವರು ದೆಹಲಿಗೆ ಹೋಗುತ್ತಾರೆ. ಆಗ ಅಲ್ಲಿ ಆರ್.ಎಸ್.ಎಸ್. ಒಳಗೊಂಡಂತೆ ಬಲಪಂಥೀಯ ಶಕ್ತಿಗಳು ಗಲಭೆ ಸೃಷ್ಟಿಸುವ ಕಾರ್ಯದಲ್ಲಿ ತೊಡಗಿಕೊಂಡಿರುತ್ತವೆ.. ಇವೆಲ್ಲಾ ನನ್ನ ಪುಸ್ತಕದಲ್ಲಿ ದಾಖಲಾಗಿವೆ. ಈ ಬಗ್ಗೆ ವಿವರಗಳನ್ನು ತಿಳಿಯಲು ಆಸಕ್ತಿ ಹೊಂದಿದವರು ಅದನ್ನು ಓದಿ ಈ ಬಗ್ಗೆ ತಿಳಿದುಕೊಳ್ಳಬಹುದು. 1947 ರ ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ಆರ್.ಎಸ್.ಎಸ್. ಗಲಭೆ ಹುಟ್ಟುಹಾಕಲು ಸಮಯ ಕಾಯುತ್ತಿತ್ತು. ಪಶ್ಚಿಮ ಪಂಜಾಬಿನಿಂದ ಬರುತ್ತಿದ್ದ ಹಿಂದೂ ಮತ್ತು ಸಿಕ್ಖ್ ನಿರಾಶ್ರಿತರು ತಾಯ್ನಾಡಿನಲ್ಲಿ (ಅದನ್ನೀಗ ಪಾಕಿಸ್ತಾನ ಎಂದು ಕರೆಯಲಾಗುತ್ತಿತ್ತು) ತಮ್ಮ ಸ್ವಂತ ಆಸ್ತಿ ಮನೆ ಎಲ್ಲವನ್ನು ಕಳಕೊಂಡಿದ್ದರು. ಅವರು ಪ್ರತೀಕಾರ ಬಯಸಿದ್ದರು, ಆರ್.ಎಸ್.ಎಸ್. ಅವರನ್ನು ಪ್ರೋತ್ಸಾಹಿಸುತ್ತಿತ್ತು. 1947ರ ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ದೆಹಲಿಯಲ್ಲಿ ಒಬ್ಬ ಮುಸ್ಲಿಂ ಸಹ ಇರಕೂಡದು ಎಂದು ಅವರು ಹೇಳುತ್ತಿದ್ದುದು ಮತ್ತು ಅದನ್ನು ಆರ್.ಎಸ್.ಎಸ್. ಪುನರುಚ್ಚರಿಸುತ್ತಿತ್ತು, ಇಡೀ ರಾಜಧಾನಿ ದೆಹಲಿಯನ್ನು ಪೂರ್ತಿ ತಮ್ಮದಾಗಿಸಿಕೊಳ್ಳಲು ಹೊರಟಿದ್ದರು. ಗಾಂಧಿ ಪುನಃ 1948ರ ಜನವರಿ ಎರಡನೆಯ ವಾರದಲ್ಲಿ ಉಪವಾಸ ಕೂತರು ಮತ್ತು ಶಾಂತಿ ಮರುಸ್ಥಾಪಿಸುವಲ್ಲಿ ಯಶಸ್ವಿಯಾದರು. ಆದರೆ ಜನವರಿ 30 ರಂದು ಗಾಂಧಿ ಹಿಂದೂ ಮಹಾಸಭಾ ಮತ್ತು ಆರ್.ಎಸ್.ಎಸ್.ಗೆ ಸೇರಿದ ವ್ಯಕ್ತಿಯೊಬ್ಬನಿಂದ ಹತ್ಯೆಗೀಡಾದರು. ಆತ ಗಾಂಧಿಯನ್ನು ದ್ವೇಷಿಸುತ್ತಿದ್ದ ಏಕೆಂದರೆ ಗಾಂಧಿ ಮುಸ್ಲಿಮರು ಮತ್ತು ಹಿಂದೂಗಳಿಗೆ ಸಮಾನಹಕ್ಕುಗಳಿರಬೇಕೆಂದು ಬಯಸಿದ್ದರು. ಗಾಂಧಿಯನ್ನು ದ್ವೇಷಿಸಲು ಇದೊಂದು ಬಹಳ ಮುಖ್ಯ ಕಾರಣವಾಗಿತ್ತು. ಗಾಂಧಿ ಹತ್ಯೆಯ ಒಂದು ಅಸಾಧಾರಣವಾದ ಪರಿಣಾಮವೆಂದರೆ ಅದು ನಿಜವಾಗಿಯೂ ಹಿಂದೂಗಳಿಗೆ ಅವಮಾನಕರವಾದುದಾಗಿತ್ತು, ಅವರೊಬ್ಬ ಮಹಾನ್ ನಾಯಕನನ್ನು ಹತ್ಯೆ ಮಾಡಿದ್ದರು. ಈ ಘಟನೆ ನೆಹರೂ ಮತ್ತು ಪಟೇಲರನ್ನು ಒಂದುಗೂಡಿಸಿತು. ಅವರು ಭಾರತವನ್ನು ಒಗ್ಗೂಡಿಸಲು ಒಂದಾಗಿ ಕೆಲಸಮಾಡಲಾರಂಭಿಸಿದರು. ಸರ್ಕಾರದಲ್ಲಿ ಬಹಳ ಮುಖ್ಯ ಪಾತ್ರವಹಿಸಿದ್ದ ನೆಹರೂ ಮತ್ತು ಪಟೇಲರು ತಮ್ಮ ಭಿನ್ನಾಭಿಪ್ರಾಯವನ್ನು ತೊಡೆದುಹಾಕಿ ಭಾರತವನ್ನು ಒಗ್ಗೂಡಿಸುವ ನಿಟ್ಟಿನಲ್ಲಿ ಕೆಲಸ ಮಾಡಲಾರಂಭಿಸಿದರು. ಮೂಲಭೂತವಾದದ ಮೇಲೆ ನಿಂತಿರುವ ಇಂದಿನ ವಾತಾವರಣದಲ್ಲಿ ಅಲ್ಪಸಂಖ್ಯಾತರು ವಿಧೇಯರಾಗಿರಬೇಕು, ವಿನೀತರಾಗಿರಬೇಕು, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಕಾನೂನುಬದ್ಧವಾಗಿಯೂ ಹಿಂದೂಗಳ ಶ್ರೇಷ್ಠತೆಯನ್ನು ಒಪ್ಪಿಕೊಳ್ಳಬೇಕು ಎಂಬ ನಿರೀಕ್ಷೆ ಇರುವಂತಹ ಈ ದಿನಗಳಲ್ಲಿ ವಿಶೇಷವಾಗಿ ನನ್ನ ಅಭಿಪ್ರಾಯದಂತೆ ಗಾಂಧಿ ಪ್ರಸ್ತುತ ಎಂಬುದಕ್ಕೆ ಇದು ಮೂರನೆಯ ಕಾರಣ. ಮುಖ್ಯವಾಗಿ ಭಾರತದ ಈಗಿನ ಆಡಳಿತ ಪಕ್ಷ ಮತ್ತು ನಮ್ಮ ರಾಜ್ಯದಲ್ಲಿ, ನಾನೆಲ್ಲಿ ಇದ್ದೇನೆಯೋ ಆ ರಾಜ್ಯದಲ್ಲಿ ಇಂಡಿಯಾವನ್ನು ಹಿಂದೂ ಪಾಕಿಸ್ತಾನ ಮಾಡಲು ಬಯಸುತ್ತಿದೆ. ಒಂದು ಧರ್ಮ, ಬಹುಸಂಖ್ಯಾತರ ಧರ್ಮ ಶ್ರೇಷ್ಠ, ನಾಗರಿಕರು ಬಹುಸಂಖ್ಯಾತರ ಧರ್ಮಕ್ಕೆ ವಿಧೇಯರಾಗಿದ್ದರೆ ಅಂತಹ ರಾಜ್ಯ ಅತ್ಯುತ್ತಮ ರಾಜ್ಯ, ಹೀಗೆ ಆಳುವ ಪಕ್ಷ ಹೇಳುತ್ತದೆ, ಒಂದೇ ಮಾತಿನಲ್ಲಿ ಹೇಳುವುದಾದರೆ ಗಾಂಧಿ ಇದನ್ನು ಖಂಡಿತವಾಗಿಯೂ ಬಯಸಿರಲಿಲ್ಲ.

**(ಮುಂದುವರೆಯುವುದು)**

**(21 ಡಿಸೆಂಬರ್ 2022 ರಂದು ಬೆಂಗಳೂರಿನ ಟೌನ್‌ಹಾಲ್‌ನಲ್ಲಿ ಖ್ಯಾತ ಇತಿಹಾಸತಜ್ಞ ಶ್ರೀ ರಾಮಚಂದ್ರ ಗುಹಾ ಅವರು ಡಿ.ಎಸ್. ನಾಗಭೂಷಣ ಅವರ 'ಗಾಂಧಿ ಕಥನ' ಪುಸ್ತಕದ 25 ನೇ ಮುದ್ರಣ ಲೋಕಾರ್ಪಣೆ ಮಾಡುವ ಸಂದರ್ಭದಲ್ಲಿ ಆಡಿದ ಮಾತುಗಳ ಕನ್ನಡ ಅವತರಣಿಕೆ) (ಇಂಗ್ಲಿಷ್‌ನಿಂದ ಕನ್ನಡಕ್ಕೆ ತಂದವರು ಶಿವಮೊಗ್ಗದ ಕೆ. ಪದ್ಮಾಕ್ಷಿ.)**

# ಕಾರ್ಪೊರೇಟ್ ಜಗತ್ತಿನಲ್ಲಿ ಗಾಂಧಿ...



ಇದು ಹಲವು ವರ್ಷಗಳ ಹಿಂದೆ ನಡೆದ ಘಟನೆ. ಹಿರಿಯ ಕಾರ್ಯನಿರ್ವಾಹಕರ (ಸೀನಿಯರ್ ಎಕ್ಸಿಕ್ಯೂಟಿವ್) ವ್ಯಾಸಂಗಕ್ಕಾಗಿ ನಾನು ಪ್ರತಿಷ್ಠಿತ ಕೊಲಂಬಿಯಾ ಬ್ಯುಸಿನೆಸ್ ಸ್ಕೂಲ್ ಗೆ ಸೇರಿಕೊಂಡಿದ್ದೆ. ಆ ದಿನಗಳಲ್ಲಿ, ಈ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕೊಲಂಬಿಯಾ ಸ್ಕೂಲ್ ; ಹಾರ್ವರ್ಡ್, ಕೆಲ್ಲಾಗ್ ಮತ್ತು ಜಗತ್ತಿನ ಇತರೆ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳನ್ನು ಮೀರಿಸಿ ಜಗತ್ತಿನಲ್ಲೇ ಮೊದಲ ಸ್ಥಾನದಲ್ಲಿತ್ತು. ಈಗಲೂ ಇದು ಜಗತ್ತಿನ ಮೊದಲ ಮೂರು ಸ್ಕೂಲ್‌ಗಳ ಸ್ಥಾನದಲ್ಲಿದೆ. ಕೊಲಂಬಿಯಾದ ಹಿರಿಯ ಕಾರ್ಯನಿರ್ವಾಹಕ ತರಬೇತಿ ಎಂದರೆ ಅತ್ಯುನ್ನತ ವ್ಯಾಸಂಗ ಎಂದೇ ಈಗಲೂ ಪ್ರಚಲಿತದಲ್ಲಿದೆ. ಬಹುರಾಷ್ಟ್ರೀಯ ಜಾಗತಿಕ ಕಂಪನಿಯಲ್ಲಿ ಕನಿಷ್ಠ ಹಿರಿಯ ಉಪಾಧ್ಯಕ್ಷರ (ಸೀನಿಯರ್ ವೈಸ್ ಪ್ರೆಸಿಡೆಂಟ್ ) ಹುದ್ದೆಯಲ್ಲಿ ಇರುವವವರು ಮಾತ್ರ ಈ ವ್ಯಾಸಂಗಕ್ಕೆ ಅಹ್ರತೆ ಪಡೆಯುತ್ತಾರೆ. ಇದರ ಜೊತೆಗೆ ಕೊಲಂಬಿಯಾ ಶಿಕ್ಷಣ ಸಂಸ್ಥೆ ನಡೆಸುವ ಒಂದೆರಡು ಅಹ್ರತಾ ಪರೀಕ್ಷೆಯಲ್ಲಿ ಕೂಡಾ ಅವರು ಈ ವ್ಯಾಸಂಗಕ್ಕಾಗಿ ಪಾಸ್ ಆಗಲೇ ಬೇಕು. ಅಂದರೆ ; ಇದು ಅಷ್ಟು ಕಠಿಣ ವ್ಯಾಸಂಗ ಕಾರ್ಯಕ್ರಮ.

ಇಷ್ಟು ಕಠಿಣವಾದ ಅಹ್ರತಾ ಪರೀಕ್ಷೆಯಲ್ಲಿ ಪಾಸಾಗಿದ್ದ ನಾವು ನಲವತ್ತು ಮಂದಿ ಈ ತರಗತಿಯಲ್ಲಿದ್ದೆವು. ಇದು ಪೂರ್ಣ ವೈವಿಧ್ಯಮಯ ಹಿನ್ನೆಲೆಯಿಂದ ಬಂದಿದ್ದವರ ತರಗತಿಯಾಗಿತ್ತು. ಇಲ್ಲಿ ವ್ಯಾಸಂಗಕ್ಕೆ ಸೇರಿದ್ದ ಕಾರ್ಯನಿರ್ವಾಹಕರು ಬೇರೆ ಬೇರೆ ರಾಷ್ಟ್ರ, ಖಂಡ ಮತ್ತು ಜನಾಂಗಕ್ಕೆ ಸೇರಿದವರಾಗಿದ್ದರು. ಕೆಲವು ಹೆಸರು ಹೇಳ ಬೇಕೆಂದರೆ, ಏಷ್ಯಾ ಖಂಡಕ್ಕೆ ಸೇರಿದ ಜಪಾನ್, ಪಾಕಿಸ್ತಾನ, ಥೈಲ್ಯಾಂಡ್ ಮತ್ತು ಯುರೋಪ್ ಖಂಡದ ಜರ್ಮನಿ, ಇಂಗ್ಲೆಂಡ್, ಸ್ವಿಟ್ಜರ್ ಲ್ಯಾನ್ಡ್; ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ಉತ್ತರ ಅಮೇರಿಕಾ ಹೀಗೆ ಜಗತ್ತಿನ ಎಲ್ಲ ಭಾಗಗಳಿಂದ ಬಂದವರು ಅಲ್ಲಿದ್ದರು. ಅವರು ಪ್ರತಿನಿಧಿಸುತ್ತಿದ್ದ ಕೈಗಾರಿಕಾ ಕ್ಷೇತ್ರಗಳೂ ಸಹ ವಿಭಿನ್ನವಾಗಿದ್ದವು. ಬ್ಯಾಂಕಿಂಗ್, ಇನ್ಶುರೆನ್ಸ್, ತಂತ್ರಜ್ಞಾನ, ಕೈಗಾರಿಕಾ ಎಂಜಿನಿಯರಿಂಗ್, ಆಹಾರ, ಸ್ಥಳೀಯ ವ್ಯಾಪಾರ, ಸಂಪರ್ಕ ಕ್ಷೇತ್ರ, ಫ್ಯಾಬ್ರಿಕೇಷನ್, ಆಟೋಮೋಟಿವ್, ಏರೋ ಸ್ಪೇಸ್, ಫಾರ್ಮಾ ಇತ್ಯಾದಿ.. ಇವು ಜಗತ್ತಿನ ಭವಿಷ್ಯದ 100 ಬಹುದೊಡ್ಡ ಕಂಪೆನಿಗಳು ಹಾಗೂ ಹೆಸರಾಂತ ಬ್ರಾಂಡ್ ಗಳಾಗಿದ್ದವು. ಮೈಕ್ರೋಸಾಫ್ಟ್, ರೋಲ್ಸ್ ರಾಯ್, ಎ ಟಿ & ಟಿ, ಯೂನಿ ಲಿವರ್ ಇತ್ಯಾದಿ ಕಂಪನಿಗಳ ಪುರುಷರು ಮತ್ತು ಮಹಿಳಾ ಎಕ್ಸಿಕ್ಯೂಟಿವ್ ಗಳು ಈ ವ್ಯಾಸಂಗದಲ್ಲಿದ್ದರು. ಇವರಲ್ಲಿ ನಾನೊಬ್ಬನೇ ಇಂಡಿಯಾದವನು .

ಈ ವ್ಯಾಸಂಗದಲ್ಲಿ ಹಲವಾರು ಕುತೂಹಲದ ಮಾದರಿಗಳು ಮತ್ತು ಕೇಸ್ ಸ್ಟಡಿಗಳಿದ್ದವು. ಹೊಸ ಹೊಸ ನಮೂನೆಯ ನಾಯಕತ್ವ ಮಾದರಿಗಳು, ಹೊಸ ಮುನ್ನೋಟದ ನಿರ್ವಹಣಾ ಕೌಶಲ್ಯಗಳು ಅಲ್ಲಿದ್ದವು. ಅದರಲ್ಲಿ ನಾಯಕತ್ವಕ್ಕೆ ಸಂಬಂಧಿಸಿದ ಬಹು ಮುಖ್ಯ ಮಾದರಿಯ ವಿಷಯವಿತ್ತು. ನಾಯಕ ಎಂದರೆ ಯಾರು? ನಾಯಕನನ್ನು ಯಾವುದು ನಿರೂಪಿಸುತ್ತದೆ. ನಾಯಕ ಹುಟ್ಟುತ್ತಾನೆಯೇ? ಅಥವಾ ರೂಪುಗೊಳ್ಳುತ್ತಾನೆಯೇ ? ಹಿರಿಯ ಕಾರ್ಯನಿರ್ವಾಹಕರು ತಾವೇ

ತಾವಾಗಿ ಯಾಕೆ ನಾಯಕರಾಗಿ ರೂಪುಗೊಳ್ಳಬೇಕು ? ಇತ್ಯಾದಿ ನಮೂನೆಯ ಪಠ್ಯ ವಿಷಯಗಳು ವ್ಯಾಸಂಗದಲ್ಲಿದ್ದವು.

ನನಗೆ ನೆನಪಿರುವಂತೆ ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರೊಫೆಸರ್ ಒಬ್ಬರು ಈ ನಮೂನೆಯ ಪಠ್ಯವನ್ನು ನಮಗೆ ಪಾಠ ಮಾಡುತ್ತಿದ್ದರು. ಸಂವಾದ ಮಾದರಿಯಲ್ಲಿ ನಡೆಯುತ್ತಿದ್ದ ಇಂಥ ಒಂದು ತರಗತಿಯಲ್ಲಿ ಒಮ್ಮೆ ಅವರು ನಮ್ಮೆಲ್ಲರಿಗೂ, ತಕ್ಷಣಕ್ಕೆ ನಿಮ್ಮ ತಲೆಯಲ್ಲಿ ಮೂಡುವ ಇಬ್ಬರು ನಾಯಕರ ಹೆಸರನ್ನು ಒಂದು ನಿಮಿಷದಲ್ಲಿ ಬರೆಯಬೇಕು; ಒಂದು ನಿಮಿಷದ ನಂತರ ಬರೆದಿರುವ ಹೆಸರುಗಳನ್ನು ಓದಿ ಹೇಳಬೇಕು ಎಂದು ತಿಳಿಸಿದರು. ಅಂತೆಯೇ ಎಲ್ಲರೂ ಬರೆದ ನಂತರ ತಾವು ಬರೆದಿದ್ದ ಹೆಸರುಗಳನ್ನು ಒಬ್ಬೊಬ್ಬರಾಗಿ ಓದಿ ಹೇಳುತ್ತಿದ್ದಂತೆ ನನಗೆ ಎಲ್ಲಿಲ್ಲದ ಅಚ್ಚರಿ. ನನ್ನ ಮೈ ಖುಷಿ, ವಿಸ್ಮಯಗಳಿಂದ ರೋಮಾಂಚನಗೊಂಡಿತು. ಅಲ್ಲಿನ ಬಹುತೇಕರು ಮಹಾತ್ಮ ಗಾಂಧೀಜಿಯವರ ಹೆಸರನ್ನು ಹೇಳುತ್ತಿದ್ದರು. ಕೊನೆಯಲ್ಲಿ ಆ ಪ್ರೊಫೆಸರ್ ಎಲ್ಲರೂ ಹೇಳಿದ್ದ ಹೆಸರುಗಳನ್ನು ಒಗ್ಗೂಡಿಸಿ ಲೆಕ್ಕ ಹಾಕಿ ಹೇಳಿದರು. ತರಗತಿಯಲ್ಲಿದ್ದ 40 ಮಂದಿಯಲ್ಲಿ 32 ಮಂದಿ ಮಹಾತ್ಮ ಗಾಂಧಿಯವರ ಹೆಸರನ್ನು ಬರೆದಿದ್ದರು. ಅದರಲ್ಲಿ ಎರಡನೆಯ ಹೆಸರು ನೆಲ್ಸನ್ ಮಂಡೇಲಾ ಅವರದ್ದಾಗಿತ್ತು. ಮೂರನೇ ಹೆಸರು ಮಾರ್ಟಿನ್ ಲೂಥರ್ ಕಿಂಗ್ ಅವರದ್ದಾಗಿತ್ತು. ನೆಲ್ಸನ್ ಮಂಡೇಲಾ ಮತ್ತು ಮಾರ್ಟಿನ್ ಲೂಥರ್ ಕಿಂಗ್ ಇವರೂ ಸಹ ಮಹಾತ್ಮ ಗಾಂಧಿಯವರಿಂದ ಪ್ರಭಾವಿತರಾಗಿ ರೂಪುಗೊಂಡ ನಾಯಕರಾಗಿದ್ದರು.

ಅಲ್ಲಿಯವರೆಗೂ ಇಂಡಿಯಾದ ಇತರರಂತೆ ಕೀಳರಿಮೆಯಿಂದ ಬಳಲುತ್ತಿದ್ದ ನಾನು ಗರ್ವದಿಂದ ತಲೆಯೆತ್ತಿ ನಿಂತೆ. ಜಗತ್ತಿನ ಇತರರೆಲ್ಲರೂ **'ಅತ್ಯುನ್ನತ ನಾಯಕ'** ಎಂದು ಪರಿಗಣಿಸುವ ಮಹಾತ್ಮ ಗಾಂಧಿಯ ನಾಡಿನವನು ನಾನು ಎನ್ನುವ ಹೆಮ್ಮೆಯಿಂದ ಎದೆಯೆತ್ತಿ ಓಡಾಡಲು ಶುರು ಮಾಡಿದೆ.

ಇದು ನನ್ನನ್ನು ಜಾಗೃತಗೊಳಿಸಿತು. ಇದು ನನ್ನ ಆತ್ಮ ವಿಶ್ವಾಸವನ್ನು ಹೆಚ್ಚಿಸಿದ್ದಷ್ಟೇ ಅಲ್ಲ; ಆಮೇಲೆ ನಾನು ಇದರಿಂದ ಉತ್ತೇಜಿತನಾಗಿ ತರಗತಿಯಲ್ಲಿ ಮುನ್ನುಗ್ಗಿ ಇತರೆ ಸಹಪಾಠಿಗಳ ಜೊತೆ ಮಾತಾಡುವ ಪರಿಪಾಠ ರೂಢಿಸಿ ಕೊಂಡೆ.ಆಮೇಲೆ ತರಗತಿಯಲ್ಲಿ ಎಲ್ಲರೂ ನನ್ನನ್ನು ಗುರುತಿಸಲಾರಂಭಿಸಿದರು

ಈ ಘಟನೆಯ ನಂತರ ಆ ಪ್ರೊಫೆಸರ್ ಅವರು ಒಮ್ಮೆ ನನ್ನ ಜೊತೆ ಮಾತನಾಡುವಾಗ " ಭಾರತದ ಮೂಲ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ದೃಶ್ಯಗಳ ಪ್ರತಿಯನ್ನು ಒದಗಿಸಿದರೆ ಅದನ್ನು ತೋರಿಸಿ ನಾನು ಇನ್ನಷ್ಟು ಪರಿಣಾಮಕಾರಿಯಾಗಿ ಪಾಠ ಮಾಡ ಬಹುದು ಹಾಗೂ ಅದು ನೈಜತೆಗೆ ಹತ್ತಿರವಾಗಿರುತ್ತದೆ ಕೂಡಾ ಅಲ್ಲವೇ ಎಂದರು.

ಅಲ್ಲಿಯವರೆಗೂ ಅವರು ರಿಚರ್ಡ್ ಅಟೆನ್ ಬರೋ ಅವರ **'ಗಾಂಧಿ'** ಸಿನಿಮಾದ ವಿಡಿಯೋ ತುಣುಕುಗಳನ್ನು ಪಾಠ ಮಾಡುವಾಗ ಬಳಸುತ್ತಿದ್ದರು . ಕೊಲಂಬಿಯಾ ಸ್ಕೂಲ್ ನ ವ್ಯಾಸಂಗ ಮುಗಿಸಿ ಭಾರತಕ್ಕೆ ಬಂದ ನಂತರ ನಾನು ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯಲ್ಲಿದ್ದ ಅಧಿಕಾರಿ ಹಾಗೂ ನನ್ನ ಅನುಗಾಲದ ಗೆಳೆಯ ವಿಶುಕುಮಾರ್ ಅವರನ್ನು ಸಂಪರ್ಕಿಸಿ ಸ್ವಾತಂತ್ರ ಹೋರಾಟದ ವಿಡಿಯೋಗಳಿಗಾಗಿ ಮನವಿ ಮಾಡಿದೆ. ಅಂದಿನ ಭಾರತ ಸರ್ಕಾರದವರು ಗಾಂಧೀಜಿಯ ಬಗ್ಗೆ ಸಮಗ್ರವಾಗಿ ಹೊರತಂದಿದ್ದ ಪಠ್ಯ, ಆಡಿಯೋ, ವಿಡಿಯೋ ದೃಶ್ಯಾವಳಿ ಎಲ್ಲವನ್ನೂ ಸೇರಿಸಿ ತಂದಿದ್ದ ಸೀಡಿ (ಕಾಂಪ್ಯಾಕ್ಟ್ ಡಿಸ್ಕ್) ನನಗೆ ಸಿಕ್ಕಿತು. ಅದನ್ನು ಹಾರ್ವರ್ಡ್ ಪ್ರೊಫೆಸರ್ ಗೆ ಕೊರಿಯರ್ ಮಾಡಿದೆ. ನನ್ನ ಈ ಸಣ್ಣ ಕೊಡುಗೆಯ ಮೂಲಕ ಗಾಂಧೀಜಿ ಮತ್ತು ಅವರ ನಾಯಕತ್ವದ ಬಗ್ಗೆ ಜಾಗತಿಕ ಮಟ್ಟದಲ್ಲಿ ಜಾಗೃತಿ ಮೂಡಿಸಿದ ಹೆಮ್ಮೆಯ ಭಾವ ನನ್ನಲ್ಲಿ ಮೂಡಿತು .

ಪ್ರೊಫೆಸರ್ ಅವರು ನಮಗೆ ನೀಡಿದ್ದ ಪರೀಕ್ಷೆಯಲ್ಲಿ ನನ್ನ ಯಾವ ಸಹಪಾಠಿಗಳೂ ಸಹಾ ಯಾವುದೇ ಕಾರ್ಪೊರೇಟ್ ಐಕಾನ್ ಗಳನ್ನು ನಾಯಕರು ಎಂದು ಗುರುತಿಸಿ ಹೇಳದೇ ಇದ್ದದ್ದು ನನ್ನನ್ನೂ ಸೇರಿದಂತೆ ನನ್ನ ಹಲವಾರು ಸಹಪಾಠಿಗಳಿಗೆ ಆಶ್ಚರ್ಯ ತಂದಿತು. ಗಾಂಧೀಜಿ ಹತ್ಯೆಯಾದ 50 – 60 ವರ್ಷಗಳ ನಂತರವೂ ಗಾಂಧೀಜಿಯವರ ನಾಯಕತ್ವದ ಅಗತ್ಯತೆ ಮತ್ತು ಕಾರ್ಪೊರೇಟ್ ಜಗತ್ತಿನಲ್ಲಿ ಅವರ ವಿಚಾರಗಳ ಪ್ರಸ್ತುತತೆ ಇರುವುದು ಅದಕ್ಕಿಂತಲೂ ಹೆಚ್ಚಿನ ಆಶ್ಚರ್ಯವನ್ನು ನನ್ನಲ್ಲಿ ಉಂಟು ಮಾಡಿದೆ. ಅಲ್ಲಿಗೆ ವ್ಯಾಸಂಗಕ್ಕಾಗಿ ಬಂದಿದ್ದವರು ತಮ್ಮ ದೇಶ, ಭಾಷೆ, ಜನಾಂಗ, ಕೈಗಾರಿಕೆ, ಹಾಗೂ ಇನ್ನಿತರೆ ಹಿನ್ನೆಲೆಗಳನ್ನು ಮೀರಿ ಗಾಂಧಿಯನ್ನು **'ಅತ್ಯುನ್ನತ ನಾಯಕ'** ಎಂದು ಒಪ್ಪಿಕೊಂಡದ್ದು ನನಗೆ ಇನ್ನಷ್ಟು ಅಚ್ಚರಿ ಮೂಡಿಸಿತು.

ನನಗೆ ಇದು ಕಣ್ಣು ತೆರೆಸಿದ ಘಟನೆ. ಬಹುಶಃ ದಕ್ಷಿಣ ಆಫ್ರಿಕಾವನ್ನು ಹೊರತು ಪಡಿಸಿ ಇತರೆ ದೇಶದವರಿಗೆ ಗಾಂಧಿ ಗೊತ್ತಿರುತ್ತಾರೆ ಎಂದು ನಾನು ಅಂದುಕೊಂಡಿರಲಿಲ್ಲ. ಆದರೆ ನನಗೇ ಆಶ್ಚರ್ಯವಾಗುವಂತೆ ಜಗತ್ತಿನ ಎಲ್ಲ ಕಡೆಯ ಜನರಿಗೆ ಗಾಂಧಿಯ ಬಗ್ಗೆ ಬರೀ ಗೊತ್ತಿರುವುದಷ್ಟೇ ಅಲ್ಲ ಅವರನ್ನು ಮಹಾನ್ ನಾಯಕ ಎಂದು ಅವರೆಲ್ಲರೂ ಗುರುತಿಸಿದ್ದರು. ಹೀಗೆ ಗಾಂಧಿಯ ಬಗ್ಗೆ ಜಗತ್ತು ಇಟ್ಟುಕೊಂಡಿರುವ ಗೌರವ ಹಾಗೂ ಅವರ ಜೀವನ ಮತ್ತು ವಿಚಾರಗಳನ್ನು ಪ್ರಚಾರ ಮಾಡಲು ನಡೆಸಿರುವ ಪ್ರಯತ್ನಗಳಿಂದ ನಾನು ಪುಳಕಿತನಾಗಿದ್ದೇನೆ.

**ಮೂವತ್ತು ವರ್ಷಗಳ ಕಾಲ**

ಬಹು ರಾಷ್ಟ್ರೀಯ ಕಾರ್ಪೊರೇಷನ್ ಸಂಸ್ಥೆಗಳಲ್ಲಿ ಹಿರಿಯ ಮುಖಂಡತ್ವ ಸ್ಥಾನದಲ್ಲಿದ್ದ ನನಗೆ, ಇಂಡಿಯಾದ ಫಕೀರನೊಬ್ಬ ಈ ಹಿಂದೆ ಮತ್ತು ಇಲ್ಲಿಯವರೆಗೂ ಯಾರೂ ಮಾಡಿರದ ಸಾಧನೆ ಮಾಡಿ ಜಗತ್ತನ್ನು ಪ್ರಭಾವಿಸಿ ಜೊತೆಗೆ ಪರಿಣಾಮವನ್ನೂ ಬೀರಿದ ಪರಿ ಅದ್ಭುತ ಎನಿಸಿತು. ಅದರಲ್ಲೂ ಬಳಸಿ ಬಿಸಾಡುವ ಪ್ರವೃತ್ತಿಯೇ ಪ್ರಧಾನವಾಗಿರುವ ಅಥವಾ ಅಲ್ಪಾವಧಿ ತಾಳಿಕೆಯ ಈ ಮುಂದುವರಿದ ತಂತ್ರಜ್ಞಾನದ ಜಗತ್ತಿನಲ್ಲಿ ಇದೆಲ್ಲಾ ಹೇಗೆ ಆಯಿತು ಎನ್ನುವುದು ಈಗಲೂ ನನ್ನನ್ನು ಕಾಡುತ್ತಿದೆ. ಈ ನಿಟ್ಟಿನಲ್ಲಿ ಗಾಂಧಿ ಕಾಲದ ಪರೀಕ್ಷೆಯನ್ನು ಎದುರಿಸಿ ಎತ್ತರದ ಸ್ಥಾನದಲ್ಲಿ ನಿಂತಿದ್ದಾರೆ. ನನ್ನ ಅನುಭವದ ಪ್ರಕಾರ ಈ ಜಗತ್ತಿನಲ್ಲಿ ಇವತ್ತಿನವರೆಗೂ ಆ ಎತ್ತರಕ್ಕೆ ಬೆಳೆದು ನಿಂತಿರುವ ಯಾವ ನಾಯಕರೂ ಇಲ್ಲ ಎನ್ನುವುದೇ ನನ್ನ ಅಭಿಪ್ರಾಯ. ನನ್ನ ಅನುಭವದಲ್ಲಿ ಜಗತ್ತಿನಲ್ಲಿ ಅಂಥವರು ನಮ್ಮ ಮಹಾತ್ಮ ಗಾಂಧಿ ಒಬ್ಬರೇ.

**– ಗೂಳೂರು ಎನ್ ರಾಘವೇಂದ್ರ**

**(ಟೆಕ್ ಮಹಿಂದ್ರ ಬಹುರಾಷ್ಟ್ರೀಯ ಕಂಪನಿಯಲ್ಲಿ ಮಾಜಿ ಜಾಗತಿಕ ವಾಣಿಜ್ಯ ಮುಖ್ಯಸ್ಥರು)**






ಮಹಾತ್ಮನನ್ನು ಗದಗಿನ ಜಕ್ಕಲಿಗೆ ಕರೆತಂದಿದ್ದ ಗಾಂಧಿವಾದಿ ಕನ್ನಡದ ಮೇಟಿ

# ಅಂದಾನಪ್ಪ ದೊಡ್ಡಮೇಟಿ

ಮಹಾತ್ಮ ಗಾಂಧೀಜಿಯ ಪ್ರಭಾವಕ್ಕೆ ಒಳಗಾದವರು ತಮ್ಮ ಜೀವನವನ್ನು ಸಮಾಜದ ಸೇವೆಗಾಗಿಯೇ ಮೀಸಲಿಡುತ್ತಾರೆ ಎಂಬುದಕ್ಕೆ ಜ್ವಲಂತ ಉದಾಹರಣೆ ನಮ್ಮ ಗದುಗಿನ ಗಾಂಧಿ ಮಾಜಿ ಸಚಿವ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿಯವರು.

**ಜನನ ಮತ್ತು ಬಾಲ್ಯ:**

ಅಂದಾನಪ್ಪನವರು ಮಾರ್ಚ್ 16, 1908 ರಂದು ಗದಗಿನ ಜಕ್ಕಲಿ ಗ್ರಾಮದ ಜಮೀನ್ದಾರಿ ಮನೆತನದಲ್ಲಿ ಜ್ಞಾನಪ್ಪ ಮತ್ತು ಬಸಮ್ಮ ದಂಪತಿಗಳ ಮಗನಾಗಿ ಜನಿಸಿದರು. ಇವರದ್ದು ಕೃಷಿ ಪ್ರಧಾನ ಕುಟುಂಬ. ಬಾಲ್ಯದಲ್ಲಿ ದೈಹಿಕವಾಗಿ ಅಶಕ್ತರಾಗಿದ್ದರಿಂದ ಇವರಿಗೆ ಹೆಚ್ಚಿಗೆ ಓದಲಾಗಲಿಲ್ಲ. ಮೂರನೇ ತರಗತಿಯವರೆಗೆ ಓದಿ ನಂತರ ತಂದೆಯವರಿಂದ ಮನೆಯಲ್ಲಿಯೇ ಜ್ಞಾನದಾಹವನ್ನು ಇಂಗಿಸಿಕೊಂಡರು. ಬಾಲ್ಯದಲ್ಲಿಯೇ ಶಬರಶಂಕರ ವಿಳಾಸ, ಜೈಮಿನಿ ಭಾರತ, ಹರಿಹರನ ರಗಳೆ, ಗದಾಯುದ್ಧ, ಕೈವಲ್ಯ ಕಲ್ಪವಲ್ಲರಿ ಮುಂತಾದ ಹಳಗನ್ನಡ ಗ್ರಂಥಗಳನ್ನು ತಂದೆಯವರು ಇವರಿಗೆ ಬೋಧಿಸಿದರು. ಇವರ ಅಣ್ಣನ ಮರಣದ ನಂತರ ಸಂಸಾರದ ಎಲ್ಲ ಜವಾಬ್ದಾರಿಗಳನ್ನು ಇವರಿಗೆ ಒಪ್ಪಿಸಿ ತಂದೆಯವರು ತೀರ್ಥಯಾತ್ರೆಗೆ ಹೊರಟು ಹೋದರು. ಸಂಸಾರದ ಸಂಪೂರ್ಣ ಜವಾಬ್ದಾರಿ ಅಂದಾನಪ್ಪನವರ ಮೇಲೆ ಬಿದ್ದಿತು.

ಹದಿನೆಂಟರ ಹರೆಯದ ಅಂದಾನಪ್ಪನವರಿಗೆ ಇಬ್ಬರನ್ನು ವರಿಸುವ ಸಂದರ್ಭ ಎದುರಾಯಿತು. ತಮ್ಮ ತಾಯಿಯ ಬಳಗದ ಸುರಕೋಡದ ಕುಲಕರ್ಣಿ ಮನೆತನದ ಹೆಣ್ಣುಮಕ್ಕಳನ್ನು ವರಿಸಿದರು. ದೇವಿಕಾರಾಣಿ ಮತ್ತು ಅನ್ನಪೂರ್ಣ ಇವರ ಪತ್ನಿದ್ವಯರು.

ಸ್ವಾತಂತ್ರ್ಯ ಹೋರಾಟದಲ್ಲಿ ಅಂದಾನಪ್ಪನವರು ಮತ್ತು ಮಹಾತ್ಮ ಗಾಂಧೀಜಿಯವರ ಸಂಪರ್ಕ : ಸಂಸಾರ, ಮನೆ, ಮನೆತನ ಎಂದು ಒಬ್ಬ ಶುದ್ಧ ಸಂಸಾರಸ್ಥರಾಗಿದ್ದ ಅಂದಾನಪ್ಪನವರು ಒಂದು ಸಾರಿ ಶ್ರೀ ವಾಮನರಾವ್ ಮಾಸ್ತರರ 'ಬಾಜೀರಾವ್' ನಾಟಕವನ್ನು ವೀಕ್ಷಿಸಿ ಬ್ರಿಟಿಷರಿಂದ ಭಾರತೀಯರ ಮೇಲಾಗುತ್ತಿರುವ ಶೋಷಣೆಯನ್ನು ಅರ್ಥ ಮಾಡಿಕೊಂಡು ಕೋಪೋದ್ರೇಕಿರಾದರು. ದೈವವೇ ಕರುಣಿಸಿತೇನೋ ಎನ್ನುವ ಹಾಗೆ ಇದೇ ಸಮಯಕ್ಕೆ ಸರಿಯಾಗಿ ಗಾಂಧೀಜಿಯವರ ಸಂಪಾದಕತ್ವದ ಹರಿಜನ್ ಮತ್ತು ಯಂಗ್ ಇಂಡಿಯಾ ಪತ್ರಿಕೆಗಳ ಸಂಪರ್ಕ ಇವರಿಗೆ ದಕ್ಕಿತು. ಬಾಲ್ಯದಿಂದಲೇ ಜನಪರ ಕಾಳಜಿ ಹೊಂದಿದ್ದ ಯುವಕ ಅಂದಾನಪ್ಪನವರಿಗೆ ಗಾಂಧೀಜಿಯವರ ಅಸ್ಪೃಶ್ಯತೆ ವಿರೋಧಿ ನಿಲುವು, ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಅಹಿಂಸೆ ಮತ್ತು ಸತ್ಯಾಗ್ರಹ ವಿಧಾನಗಳು ಬಹುವಾಗಿ ಪ್ರಭಾವಿಸಿದವು. ದೇಶಕ್ಕಾಗಿ ತಾನು ಕೂಡ ಹೋರಾಡಬೇಕು ಎಂದು ಬಯಸಿ ಗ್ರಾಮ ಮಟ್ಟದಲ್ಲಿ ತಮ್ಮ ಹೋರಾಟವನ್ನು ಸಂಘಟಿಸತೊಡಗಿದರು.

1930 ಎಪ್ರೀಲ್ 13 ನೇ ತಾರೀಖು ಅಂದಾನಪ್ಪನವರು ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮ ಪ್ರಥಮ ಹೆಜ್ಜೆಯನ್ನಿಟ್ಟರು. ಜಕ್ಕಲಿ ಗ್ರಾಮದಲ್ಲಿ ವಿದೇಶಿ ಬಟ್ಟೆಗಳನ್ನು ಬಹಿರಂಗವಾಗಿ ಸುಟ್ಟು ಹಾಕಿದರು. ಸಂಪೂರ್ಣ ಖಾದಿ ಬಟ್ಟೆ ತೊಡಲು ಸಾಮೂಹಿಕ ನಿರ್ಧಾರವನ್ನು ಗ್ರಾಮಸ್ಥರೊಂದಿಗೆ ಮಾಡಿದರು. ಗದಗಿನ ಕಾಂಗ್ರೆಸ್ ಸಂಸ್ಥೆಗೆ ಎಲ್ಲರೂ ಸದಸ್ಯತ್ವ ಪಡೆದು ವಿದ್ಯುಕ್ತವಾಗಿ ರಾಷ್ಟ್ರೀಯ ಆಂದೋಲನಕ್ಕೆ ಧುಮುಕಿದರು.

ಜಕ್ಕಲಿಯಲ್ಲಿ 'ದೇಶ ಸೇವಾ ಸಂಘ'ವನ್ನು ಸ್ಥಾಪಿಸಿ ಜಾತಿ, ಮತ, ಧರ್ಮದ ಗಡಿಯನ್ನು ಮೀರಿ ಎಲ್ಲರೂ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಬೇಕೆಂದು ಜನರನ್ನು ಸಂಘಟಿಸಿದರು. ಸಂಘದಲ್ಲಿ ಚರಕಗಳು ತಿರುಗಿದವರು. ಖಾದಿ ಬಟ್ಟೆ ಜನರ ಜೀವನವಾಯಿತು. ಊರಿನ ತುಂಬೆಲ್ಲಾ ಕಳ್ಳಿಮನಿ ತಿಪ್ಪಣ್ಣನವರನ್ನು ಕರೆದುಕೊಂಡು ಅವರಿಂದ ದೇಶಭಕ್ತಿ ಗೀತೆಗಳನ್ನು ಹಾಡಿಸಿ ಪ್ರಭಾತ್ ಪೇರಿ ಮಾಡಿಸಿ ಯುವಕರನ್ನು ಆಕರ್ಷಿಸಿದರು. ಕೌನ್ಸಿಲ್ ಚುನಾವಣೆಯನ್ನು ಬಹಿಷ್ಕರಿಸಿ ಅಬ್ಬಿಗೇರಿಯಲ್ಲಿ ಯಶಸ್ವಿಯಾಗಿ ಪಿಕೇಟಿಂಗ್ ಮಾಡಿದರು. ರಾಷ್ಟ್ರೀಯ ನಾಯಕರನ್ನು ಜಕ್ಕಲಿಗೆ ಕರೆಯಿಸಿ ಅವರಿಂದ ದೇಶಪ್ರೇಮದ ಭಾಷಣಗಳನ್ನು ಮಾಡಿಸಿ ಮಹಾತ್ಮ ಗಾಂಧೀಜಿಯವರ ಪ್ರಭಾವಿ ವಲಯವನ್ನು ಪ್ರವೇಶಿಸಿದರು.

**ಜಕ್ಕಲಿಗೆ ಬಂದ ಪಂಡಿತ್ ನೆಹರೂ :**

ತಮ್ಮ ಆಪ್ತ ಸ್ನೇಹಿತ ಅನಂತರಾಯ ಜಾಲಿಹಾಳ ಅವರ ಮೂಲಕ ಜವಾಹರ್ ಲಾಲ್ ನೆಹರೂ ಅವರನ್ನು ಸಂಪರ್ಕಿಸಿ ಅವರನ್ನು ಜಕ್ಕಲಿ ಗ್ರಾಮಕ್ಕೆ ಕರೆತರುವಲ್ಲಿ ಯಶಸ್ವಿಯಾದರು. 1931 ರ ಡಿಸೆಂಬರ್ನಲ್ಲಿ ನೆಹರೂ ಅವರು ಜಕ್ಕಲಿಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಬಾಗವಹಿಸಿದರು. ಅವರಿಗೆ ಪ್ರಿಯವಾದ ಗುಲಾಬಿ ಹಾರವನ್ನು ಹಾಕಿ 2 ತೊಲೆಯ ಬಂಗಾರದ

ತಕಲಿಯನ್ನು ಉಡುಗೊರೆಯಾಗಿ ಅಂದಾನಪ್ಪನವರು ನೀಡಿದರು. ಇದರಿಂದ ಕುಪಿತರಾದ ಬ್ರಿಟಿಷರು ನೆಹರೂ ಅವರನ್ನು ಏಕೆ ಕರೆಸಿದೀರಿ? ಎಂದು ಕೇಳಿದಾಗ 'ಅವರು ನಮ್ಮ ನಾಯಕರು ಕರೆಸಿದ್ದೇವೆ. ನಿಮ್ಮ ರಾಜರು ಮಹಾತ್ಮ ಗಾಂಧೀಜಿಯರನ್ನು ಇಂಗ್ಲೆಂಡಿಗೆ ಏಕೆ ಕರೆಸಿಕೊಂಡಿದ್ದರು? ಎಂದು ಮಾತಿನ ಚಾಟಿ ಬೀಸಿ ಅವರನ್ನು ತೆಪ್ಪಗಿರಿಸಿದರು.

ಈಡೇರಿದ ಉತ್ಕಟ ಬಯಕೆ ಮತ್ತು ತ್ಯಾಗ ಜೀವನಕ್ಕೆ ಸಂಕಲ್ಪ ಮಾಡಿದ ಅಂದಾನಪ್ಪನವರು : ಗಾಂಧೀಜಿಯವರ ಸಂಪರ್ಕಕ್ಕೆ ಬಂದ ವ್ಯಕ್ತಿ ಎಂದಿಗೂ ಸ್ವಾರ್ಥಿಯಾಗಲು ಸಾಧ್ಯವಿಲ್ಲ ಎಂಬ ಲಂಕೇಶ್ ಅವರ ಮಾತು ತುಂಬಾ ಅರ್ಥಗರ್ಭಿತವಾದದ್ದು. ಅಂದಾನಪ್ಪನವರ ಜೀವನದಲ್ಲಿ ಇದು ಸೂರ್ಯನಷ್ಟೇ ಸತ್ಯವಾಯಿತು. ಮಹಾತ್ಮ ಗಾಂಧೀಜಿಯವರಿಂದ ಪ್ರಭಾವಿತರಾಗಿ ಅಸ್ಪೃಶ್ಯತೆ ನಿವಾರಣೆಗೆ ಟೊಂಕ ಕಟ್ಟಿ ನಿಂತಿದ್ದ, ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕ್ಕಿದ್ದ ಇವರಿಗೆ ಗಾಂಧೀಜಿಯವರನ್ನು ಭೇಟಿಯಾಗುವ ಸುಸಂದರ್ಭ ಬಂದೊದಗಿತು. 1932 ರಲ್ಲಿ ದಲಿತರಿಗೆ ಪ್ರತ್ಯೇಕ ಮತಕ್ಷೇತ್ರದ ವಿರುದ್ಧ ಗಾಂಧೀಜಿಯವರು ಪೂನಾದ ಯರವಾಡ ಜೈಲಿನಲ್ಲಿ ಉಪವಾಸ ಕುಳಿತಾಗ ಅಂದಾನಪ್ಪನವರು ಗಾಂಧೀಜಿಯವರಿಗೆ ಭೇಟಿಯಾದರು. ಸುಮಾರು ಒಂದು ಗಂಟೆಯ ಭೇಟಿ ಇವರಲ್ಲಿ ಜೀವನ ಪರ್ಯಂತ ಬದಲಾವಣೆ ತಂದುಬಿಟ್ಟಿತು. ಪ್ರಥಮ ಭೇಟಿಯ ಮಾತುಕತೆಯ ನಡುವೆ 'ಮಹಾತ್ಮ ಅಸ್ಪೃಶ್ಯತೆ ನಿವಾರಣೆಗೆ ನಾನು ಏನು ಮಾಡಲು ಸಾಧ್ಯ? ಎಂದು ಇವರು ಕೇಳಿದಾಗ 'ನಿಮ್ಮ ನಾಡಿನ ಬಸವಣ್ಣನವರು ಮಾಡಿದ್ದನ್ನೆ ಮಾಡೋಣ' ಎಂಬ ಗಾಂಧೀಜಿಯವರ ಉತ್ತರದಿಂದ ಸಂತುಷ್ಟರಾಗಿ ಜಕ್ಕಲಿಗೆ ಬರುವಂತೆ ಅವರಿಗೆ ಆಹ್ವಾನ ನೀಡಿ ಹರಿಜನ ಉದ್ಧಾರಕ್ಕೆ 2000 ರೂಪಾಯಿಗಳನ್ನು ಮಹಾತ್ಮನಿಗೆ ಅರ್ಪಿಸಿ ಹೋರಾಟವನ್ನು ಬಲಗೊಳಿಸಲು ಜಕ್ಕಲಿಗೆ ಮರಳಿದರು.

ಸ್ವಾತಂತ್ರ್ಯ ಹೋರಾಟಕ್ಕೆ ಆರ್ಥಿಕ ಸಹಾಯ ಮಾಡುತ್ತಿದ್ದ ಶ್ರೀಮಂತ ಮನೆತನದ ಅಂದಾನಪ್ಪನವರ ಮೇಲೆ ಬ್ರಿಟಿಷರು ಸದಾ ಕಾಲ ಹದ್ದಿನ ಕಣ್ಣಿಟ್ಟಿದ್ದರು. 1933 ಫೆಬ್ರುವರಿ 4 ರಂದು ಇವರನ್ನು ಬಂಧಿಸಿ ತಾಲೂಕು ದಿಗ್ಬಂಧನ ಹೇರಲಾಯಿತು. ಇದನ್ನು ಧಿಕ್ಕರಿಸಿ ರೋಣ ತಾಲೂಕಿನ ಸೀಮೆ ದಾಟಿ ಹೋರಾಟದಲ್ಲಿ ಭಾಗವಹಿಸಿದಾಗ ಮಾರ್ಚ್ 22 ರಂದು ಬಂಧಿಸಿ ಹಿಂಡಲಗಾ ಜೈಲಿಗೆ ಹಾಕಿದರು. ಇವರ ಮನೆಯಲ್ಲಿನ ಲಕ್ಷಾಂತರ ಬೆಲೆ ಬಾಳುವ ಧನ, ಕನಕಗಳನ್ನು ಎರಡು ಸಾರಿ ಬ್ರಿಟಿಷ್ ಸರ್ಕಾರ ಜಪ್ತಿ ಮಾಡಿತು.

ಜೈಲಿನಲ್ಲಿದ್ದಾಗ ಅವರ ತಾಯಿ ಖಾಯಿಲೆ ಬಿದ್ದರು. ಪೆರೋಲ್ ಮೇಲೆ ಬಿಡುಗಡೆಯಾಗಿ ತಾಯಿಯನ್ನು ಭೇಟಿಯಾಗಲು ನಿರಾಕರಿಸಿದರು. 'ಬ್ರಿಟಿಷ್ ಸರ್ಕಾರಕ್ಕೆ ಬಗ್ಗಿ ನಾನು ಪೆರೋಲ್ ಕೇಳುವುದಿಲ್ಲ. ಜೈಲುವಾಸವನ್ನು ಪೂರ್ತಿಯಾಗಿ ಅನುಭವಿಸಿ ಹೊರಬರುತ್ತೇನೆ. ನನ್ನ ತಾಯಿಗೆ ನನ್ನ ಪರವಾಗಿ ತಂತಿ ಕಳುಹಿಸಿ' ಎಂದು ಗಾಂಧೀಜಿಯವರಿಗೆ ಜೈಲಿನಿಂದಲೇ ಪತ್ರ ಬರೆದರು. ಇವರ ಅಚಲ ದೇಶಭಕ್ತಿಗೆ ಶಹಬ್ಬಾಸ್ಗಿರಿ ಕೊಟ್ಟ ಮಹಾತ್ಮ 'ಬೇಗ ಹುಷಾರಾಗಿ ತಾಯಿ. ಅಂದಾನಪ್ಪನವರಂಥ ಅಪ್ರತಿಮ ದೇಶಭಕ್ತನನ್ನು ಪಡೆದ ನೀವು ಧನ್ಯ' ಎಂದು ಅವರ ತಾಯಿ ಬಸಮ್ಮನವರಿಗೆ ತಂತಿ ಕಳುಹಿಸಿದರು.





ಗದುಗಿನ ಜಕ್ಕಲಿಗೆ ಮಹಾತ್ಮನ ಭೇಟಿ : ಅಂದಾನಪ್ಪನವರ ಅವಿರತ ಪ್ರಯತ್ನದಿಂದ ಗದಗಿನ ಜಕ್ಕಲಿ ಎಂಬ ಪುಟ್ಟ ಗ್ರಾಮಕ್ಕೆ ಭಾರತದ ಸರ್ವೋಚ್ಛ ನಾಯಕ ಮಹಾತ್ಮ ಗಾಂಧೀಜಿಯವರು 1934 ರ ಮಾರ್ಚ್ 3 ರಂದು ಭೇಟಿ ನೀಡಿದರು. ಅಸ್ಪೃಶ್ಯತೆ ವಿರೋಧವೇ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿತ್ತು. ಗಾಂಧೀಜಿಯವರ ಸಮ್ಮುಖದಲ್ಲಿ ಇಡೀ ಗ್ರಾಮವೇ ಅಸ್ಪೃಶ್ಯತೆ ಕಿತ್ತೊಗೆಯುವ ಪ್ರಮಾಣ ಮಾಡಿತು. ಗಾಂಧೀಜಿಯವರ ಎದುರಿನಲ್ಲಿಯೇ ದಲಿತರಿಗೆ ಇಪ್ಪತ್ತು ಎಕರೆ ಜಮೀನನ್ನು ದಾನ ಮಾಡಿದರು.

**ಹರಿಜನ ಸೇವಕ ಸಂಘ ಸ್ಥಾಪಕ ಅಧ್ಯಕ್ಷ:**

ಜೈಲಿನಿಂದ ಬಿಡುಗಡೆಯಾದ ನಂತರ ಅಂದಾನಪ್ಪನವರು 'ಹರಿಜನ ಸೇವಕ ಸಂಘ'ವನ್ನು ಸ್ಥಾಪಿಸಿದರು ಮತ್ತು ಅಖಂಡ ಧಾರವಾಡ ಜಿಲ್ಲಾ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಹರಿಜನ ಉದ್ಧಾರಕ್ಕಾಗಿ ರಾಜ್ಯಾದ್ಯಂತ ಪ್ರವಾಸ ಮಾಡಿದರು. ತಮ್ಮ ಊರಿನಲ್ಲಿಯೂ ಕೂಡ ಜನರಿಗೆ ತಿಳುವಳಿಕೆ ನೀಡಿದರು. ಈಗಲೂ ಕೂಡ ಇವರ ಮನೆ ದಲಿತರಿಗೆ ಸದಾ ತೆರೆದಿದೆ.

**ಕನ್ನಡದ ಉಸಿರು ಅಂದಾನಪ್ಪ ದೊಡ್ಡಮೇಟಿ**

ಸ್ವಾತಂತ್ರ್ಯ ಹೋರಾಟವಷ್ಟೇ ಅಲ್ಲದೆ ಕನ್ನಡಕ್ಕಾಗಿ ಅಂದಾನಪ್ಪನವರದ್ದು ಗಮನಾರ್ಹ ಸೇವೆ. ಜಕ್ಕಲಿಯಲ್ಲಿ ಕರ್ನಾಟಕ ಏಕೀಕರಣ ಸಭೆಯನ್ನು ಸ್ಥಾಪಿಸಿ ಸಭೆ ನಡೆಸಿದರು. ಇವರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಮುಂಬೈ ಶಾಸನ ಸಭೆಯಲ್ಲಿ ಪ್ರಪ್ರಥಮ ಬಾರಿಗೆ ಕನ್ನಡ ಮಾತನಾಡಿದ ಹೆಮ್ಮೆಯ ಕನ್ನಡಿಗರೆನಿಸಿದ್ದಾರೆ. ಭುವನೇಶ್ವರಿಯ ಪ್ರಥಮ ತೈಲ ಚಿತ್ರ ರಚನೆಯಾಗಿದ್ದು ಕೂಡ ಇವರ ಪರಿಕಲ್ಪನೆಯಲ್ಲಿಯೇ. ಕರ್ನಾಟಕ ಏಕೀಕರಣಕ್ಕಾಗಿ ಉಪವಾಸವನ್ನು ಮಾಡಿದರು. ಮೈಸೂರು ರಾಜ್ಯಕ್ಕೆ ಕರ್ನಾಟಕ ಎಂಬ ಹೆಸರೇ ಸೂಕ್ತ ಎಂದು ಶಾಸನಸಭೆಯಲ್ಲಿ ಆಧಾರ ಸಹಿತ ವಾದಿಸಿದ ಮೊದಲ ವ್ಯಕ್ತಿ ಇವರು. ಇಷ್ಟೆಲ್ಲಾ ಕನ್ನಡ ಕಟ್ಟುವ ಕೆಲಸವನ್ನು ಮಾಡಿದ ಇವರು ಕಡೆಗೆ ಕನ್ನಡಿಗರಿಂದಲೇ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ನಮ್ಮ ನಾಡಿನ ದುರಂತ.

ಜಮಖಂಡಿ ಸಂಸ್ಥಾನದ ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿ

ಸಂಸ್ಥಾನಗಳ ವಿಲೀನಿಕರಣವನ್ನು ಸಸೂತ್ರವಾಗಿ ನಡೆಯುವಂತೆ ಮಾಡಲು ಮೊದಲ ಬುನಾದಿ ಹಾಕಿದರು. ಭಾರತದ ಒಕ್ಕೂಟಕ್ಕೆ ಮೊದಲು ಸಹಿ ಮಾಡಿದ ಸಂಸ್ಥಾನ ಎಂಬ ಕೀರ್ತಿ ಕೂಡ ಜಮಖಂಡಿ ಸಂಸ್ಥಾನದ ಹೆಸರಿನಲ್ಲಿದೆ.

ಇವರಿಗೆ ರೈತರೆಂದರೆ ಅಪಾರ ಪ್ರೀತಿ ಮತ್ತು ಗೌರವ. ಜಮಖಂಡಿ ಸಂಸ್ಥಾನದ ಮಾರ್ಗದರ್ಶಕರಾಗಿದ್ದಾಗ ಹಲವಾರು ರೈತರ ಕಷ್ಟಗಳನ್ನು ಬಗೆಹರಿಸಿದರು. ಹಂಚಿನಾಳ ಎಂಬ ಗ್ರಾಮದ ಜನರ ಕಷ್ಟಗಳನ್ನು ಪರಿಹರಿಸಿದ್ದಕ್ಕಾಗಿ ಈಗಲೂ ಇವರ ಭಾವಚಿತ್ರ ಆ ಗ್ರಾಮದ ಗ್ರಾಮ ಪಂಚಾಯತಿ ಆಫೀಸಿನಲ್ಲಿದೆ. ಕೆಳಗಡೆ 'ಹಂಚಿನಾಳ ಗ್ರಾಮ ಜನಕ' ಎಂದು ಬರೆಯಲಾಗಿದೆ. ಮುಂದುವರಿದು ಸಣ್ಣ ನೀರಾವರಿ ಮಂತ್ರಿಯಾಗಿ ಕಾರ್ಯನಿರ್ವಹಿಸಿ ಸಾವಿರಾರು ಕೆರೆಗಳಿಗೆ ಮರುಜೀವ ನೀಡಿದರು. ಭ್ರಷ್ಟಾಚಾರ ರಹಿತ ಆಡಳಿತ, ನಿಸ್ವಾರ್ಥ ಸಮಾಜ ಸೇವೆಗಳನ್ನೇ ಜೀವನದ ಮುಖ್ಯ ಮಂತ್ರಗಳನ್ನಾಗಿ ಮಾಡಿಕೊಂಡಿದ್ದ ಈ ಚೇತನ ನಂತರದ ಆಡಳಿತ ಕಂಡು ಜಿಗುಪ್ಸೆಯಿಂದ ರಾಜಕೀಯದಿಂದ ಹಿಂದೆ ಸರಿಯಿತು.

ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿಯನ್ನು ಕೂಡ ತೆಗೆದುಕೊಳ್ಳದೆ 'ನಾನು ಮಾಡಿದ್ದು ದೇಶ ಸೇವೆ. ಅದಕ್ಕೆ ದುಡ್ಡು ತೆಗೆದುಕೊಳ್ಳಲಾರೆ' ಎಂದು ಘೋಷಿಸಿ ಗ್ರಾಮಮಟ್ಟದ ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಿ ಅವರಿಗೆ ಪಿಂಚಣಿ ಸಿಗುವ ವ್ಯವಸ್ಥೆ ಮಾಡಿದರು. ತಮ್ಮ ಮಕ್ಕಳಿಗೆ 'ಜಾತಿ, ಧರ್ಮವನ್ನು ತೊಡೆದು ಬದುಕಿ. ಇದೇ ನೀವು ನನಗೆ ಕೊಡುವ ಕೊಡುಗೆ' ಎಂದು ದಾರಿ ತೋರಿಸಿದರು.

**ಕಣ್ಮರೆಯಾದ ಕನ್ನಡದ ದೀಪ :**

ಬೆಂಗಳೂರಿನಿಂದ ಹುಬ್ಬಳ್ಳಿಗೆ ಬರುವಾಗ ಕಾರು ಅಫಘಾತವಾಗಿ ಅಂದಾನಪ್ಪನವರು ಗಂಭೀರವಾಗಿ ಗಾಯಗೊಂಡರು. ಖಾಸಗಿ ಆಸ್ಪತ್ರೆ ಸೇರಲು ಒಪ್ಪದೇ ಕಿಮ್ಸ್‌ನಲ್ಲಿ ಚಿಕಿತ್ಸೆ ಪಡೆದು ಕೊನೆಗೆ 1972 ರ ಫೆಬ್ರುವರಿ 21 ದಂದು ಆಸ್ಪತ್ರೆಯಲ್ಲಿಯೇ ಕೊನೆ ಉಸಿರೆಳೆದರು.

ಸ್ವಾತಂತ್ರ್ಯ ಹೋರಾಟಗಾರ, ಲೇಖಕ, ಪತ್ರಕರ್ತ, ರಾಜಕಾರಣಿ, ಹರಿಜನ ಉದ್ಧಾರಕ, ಕರ್ನಾಟಕ ಏಕೀಕರಣದ ರೂವಾರಿ ಹೀಗೆ ಬಹುಮುಖಿ ಕೆಲಸಗಳನ್ನು ಕಡಿಮೆ ಸಮಯದಲ್ಲಿ ನಿರ್ವಹಿಸಿ ನಾಡು, ನುಡಿಗಾಗಿ ನಿಸ್ವಾರ್ಥ ಜೀವನ ನಡೆಸಿದ ಶ್ರೀ ಅಂದಾನಪ್ಪ ದೊಡ್ಡಮೇಟಿಯವರ ಬದುಕು ನಮಗೆಲ್ಲಾ ಮಾರ್ಗದರ್ಶಕ ಸರಕು. ಸ್ವಾತಂತ್ರ್ಯ ಹೋರಾಟಕ್ಕೆ ಅಪಾರ ಪ್ರಮಾಣದ ಆರ್ಥಿಕ ಸಹಾಯ ಮಾಡಿ ತಮ್ಮ ಆದರ್ಶಗಳಿಗೆ ಅಡ್ಡಿ ಬಂದಾಗ ರಾಜಕೀಯ ತೊರೆದು ಸಂತನಂತೆ ಬದುಕಿದ ಈ ತ್ಯಾಗಜೀವಿಯ ಒಂದು ಮೂರ್ತಿ ನಮ್ಮಲ್ಲಿ ಇಲ್ಲದಿರುವದು, ಇವರ ಹೆಸರಿನ ಒಂದು ರಸ್ತೆ ಕೂಡ ನಮ್ಮ ಕನ್ನಡ ನಾಡಿನಲ್ಲಿ ಇಲ್ಲದಿರುವುದು ಬಹಳ ದುಃಖದ ವಿಷಯವೇ ಸರಿ.

ಕೋಟಿ ಗಳಿಸುವ ಅವಕಾಶವಿದ್ದರೂ ಮೇಟಿಯೇ ಮೇಲೆಂದು ಸಾಮಾನ್ಯರಂತೆ ರೈತ ಜೀವನ ನಡೆಸಿದ ಕನ್ನಡದ ಉಸಿರು ದೊಡ್ಡಮೇಟಿಯವರಿಗೆ ಕೃತಜ್ಞತೆಯ ಕುಸುಮಗಳನ್ನು ಅರ್ಪಿಸೋಣ..

ದೊಡ್ಡಮೇಟಿಯವರಿಗೆ ನನ್ನ ದೊಡ್ಡ ಸಲಾಂ...

**– ರವಿಚಂದ್ರ ಜಂಗಣ್ಣವರ್**

# STATEMENT ABOUT OWNERSHIP AND OTHER PARTICULARS ABOUT VARTHA JANAPADA

## FORM IV Rule 8

1. Place of Publication : Bengaluru
2. Periodicity of Publication : Monthly
3. Printer Name :
   Nationality : Indian
   Address : **CreativeGeekZ**
   Yadhava College Road,
   Madhavanagara,
   Bengaluru - 560001
4. Publishers Name : **Indira Krishnappa**
   **Secretary**
   Nationality : Indian
   Address : **Karnataka Gandhi Smaraka Nidhi**
   Gandhi Bhavana,
   Kumara Park East
   Bangalore - 560 001
5. Editor's Name : **Indira Krishnappa**
   Nationality : Indian
   Address : **Karnataka Gandhi Smaraka Nidhi**
   Gandhi Bhavana,
   Kumara Park East
   Bangalore - 560 001
6. License No. - Regd. No.
   **KARBIL/2019/77950**

I, Smt. Indira Krishnappa hereby declare that the particulars given above are true to the best of my knowledge and belief.

Bengaluru
15.02.2023

Sd.
Secretary
Signature of the Publisher



# ಮಾತೃ ದಿವಸ್

## ಕಸ್ತೂರ್ ಬಾ ಪುಣ್ಯ ಸ್ಮರಣೆ

**ಕ**ಸ್ತೂರ್‌ಬಾ ಅವರು 1869ರ ಏಪ್ರಿಲ್ 11ರಂದು ಕಾಥೇವಾಡದ ಪೋರ್ ಬಂದರಿನಲ್ಲಿ ಜನಿಸಿದರು. ಇವರು ಹೆಸರಾಂತ ವರ್ತಕ ಶ್ರೀ ಗೋಕುಲ್ ದಾಸ್ ಮಾಕಂಜಿ ಮತ್ತು ಶ್ರೀಮತಿ ಬ್ರಜಕುಮಾರಿ ಬಾಯಿ ಅವರ ಏಕೈಕ ಪುತ್ರಿಯಾಗಿದ್ದರು.

ಶ್ರೀಮತಿ ಬ್ರಜಕುಮಾರಿ ಬಾಯಿ ಹೆಣ್ಣು ಮಗುವಿಗೆ ಜನ್ಮವಿತ್ತರೆಂಬ ಸುದ್ದಿ ಕೇಳಿದೊಡನೆಯೇ ಗೋಕುಲದಾಸ್ ಅವರು ಪತ್ನಿ ಮತ್ತು ಮಗು ನೋಡಲು ಬಂದರು. ಮಗಳನ್ನು ನೋಡಿದಾಕ್ಷಣ ಅವರು ಮೃದು ಸ್ವರದಲ್ಲಿ "ಕಸ್ತೂರಿ", "ಕಸ್ತೂರ್‌ಬಾ" ಎಂದು ಉಚ್ಚರಿಸಿದರು. ಅಂದೇ ಮಗುವಿನ ಹೆಸರನ್ನು ನಿರ್ಧರಿಸಿದರು. ಅಂತೆಯೇ ಆ ಮಗುವಿನ ಕೀರ್ತಿ ಆಕೆ ಬೆಳೆಯುತ್ತಿರುವಂತೆ ಕಸ್ತೂರಿ ಸುವಾಸನೆಯಂತೆ ಎಲ್ಲೆಡೆ ಪಸರಿಸಿತು. ಕಸ್ತೂರ್‌ಬಾ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದವರು. ಅವರ ತಾಯಿ ಪ್ರತಿನಿತ್ಯ ದೇವಾಲಯಕ್ಕೆ ಹೋಗಿ ಬರುತ್ತಿದ್ದರು. ಮತ್ತು ಮನೆಗೆ ಬಂದ ಮೇಲೆ ಪತಿಗೆ ಪ್ರಸಾದವನ್ನು ನೀಡುತ್ತಿದ್ದರು. ತಾಯಿಯೊಂದಿಗೆ ಬಾಲೆ ಕಸ್ತೂರ್‌ಬಾ ಸಹ ದೇವಾಲಯಕ್ಕೆ ಹೋಗಲು ಪ್ರಾರಂಭಿಸಿದರು.

ತಾಯಿ ಮತ್ತು ಮಗಳನ್ನು ಗಮನಿಸುತ್ತಲೇ ಇದ್ದ ಅರ್ಚಕರು "ನಿಮ್ಮ ಮಗಳು ದೈವದತ್ತವಾದ ಮಗು, ಮುಂದೆ ಇವಳ ಬಗ್ಗೆ ಬಹಳ ಹೆಮ್ಮೆ ಪಡುವಂಥಹ ದಿನಗಳು ಬರುವುವು" ಎಂದು ಬಹಳ ಸಂತೋಷದಿಂದ ನುಡಿದರು. 'ಬಾ' ಕೂಡ ದೇವರನ್ನೇ ಜೀವನದ ಕೇಂದ್ರ ಬಿಂದುವಾಗಿ ಪರಿಗಣಿಸಿದ್ದರು. ಗೋ ಪೂಜೆ ಮಾಡುವುದರಲ್ಲಿ ಬಾ ಅವರಿಗೆ ಅತಿಶಯವಾದ ಆಸಕ್ತಿ. ಸಣ್ಣ ಪ್ರಾಯದಲ್ಲೇ ಮನೆಗೆಲಸ ಮಾಡಲು ಒಗ್ಗಿಸಿಕೊಂಡಿದ್ದರು. ತಾಯಿಯ ಕಷ್ಟ ಕಾರ್ಪಣ್ಯಗಳನ್ನು ನೋಡಿ ಮನಸ್ಸನ್ನು ಅಷ್ಟೇ ಗಟ್ಟಿ ಮಾಡಿಕೊಂಡರು. ಜೀವನದಲ್ಲಿ ಏನೇ ಬಂದರೂ ಅದಕ್ಕೆ ಹೊಂದಿಕೊಂಡು ಹೋಗಬೇಕೆಂಬ ಮನೋಭಾವವನ್ನು ಬೆಳೆಸಿಕೊಂಡರು. ಎಲ್ಲಾ ವಿಚಾರಗಳಲ್ಲೂ, ಮನೆಕೆಲಸಗಳಲ್ಲೂ, ಪೂಜೆ ಪುರಸ್ಕಾರಗಳಲ್ಲೂ, ಹಿರಿಯರಿಗೆ ಗೌರವದಲ್ಲೂ, ವ್ಯವಹಾರಿಕವಾಗಿಯೂ ನೈಪುಣ್ಯತೆ ಹೊಂದಿದ್ದರು. ಆದರೆ ಅವರಿಗೆ ಎಲ್ಲರಂತೆ ಶಿಕ್ಷಣವಾಗಿರಲಿಲ್ಲ. ಕಸ್ತೂರ್‌ಬಾ ಶಾಲೆಗೆ ಹೋಗಿ ಹೆಚ್ಚು ಕಲಿತವರಲ್ಲ. (No formal Education)

**ವಿವಾಹ**

ಕಸ್ತೂರ್‌ಬಾ ಅವರ ತಂದೆ ಗೋಕುಲದಾಸ್ ಮಾಕಂಜಿ ಅವರೂ ಮತ್ತು ಮೋಹನ್‌ದಾಸ್ ಕರಮ್‌ಚಂದಗಾಂಧಿ ಅವರ ತಂದೆ ಕಾ.ಬಾ. ಗಾಂಧಿ (ಕರಮ್‌ಚಂದ ಗಾಂಧಿ) ಅವರು ಆಪ್ತ ಸ್ನೇಹಿತರು. ಅವರೀರ್ವರ ಕುಟುಂಬದ ಬಾಂಧವ್ಯವನ್ನು ಬೆಳೆಸಿ ಉಳಿಸುವ ಸಲುವಾಗಿ ಗೋಕುಲದಾಸ್ ಅವರು ತಮ್ಮ ಏಕೈಕ ಪುತ್ರಿಯನ್ನು ಮಿತ್ರರಾದ ಕಾಬಾ ಗಾಂಧಿ ಅವರ ಪುತ್ರ ಮೋಹನ್‌ದಾಸ್‌ರೊಂದಿಗೆ ವಿವಾಹ ಮಾಡುವುದಾಗಿ ಮಾತು ಕೊಟ್ಟರು. ಅವರ ಸ್ನೇಹಮಯ ಜೀವನಕ್ಕೆ ನೆಂಟಸ್ತಿಕೆಯ ಬಂಧನವೂ ಬೆಸೆಯಿತು.

ಕಸ್ತೂರ್‌ಬಾ ಹಾಗೂ ಮೋಹನ್‌ದಾಸ್ ಕರಮ್‌ಚಂದ ಗಾಂಧಿ ಅವರ ವಿವಾಹವೂ ಜರುಗಿತು. ಮದುವೆಯಾದಾಗ ಇಬ್ಬರಿಗೂ 13 ವರ್ಷ ವಯಸ್ಸು. ಕಸ್ತೂರ್‌ಬಾರವರೇ ಗಾಂಧೀಜಿ ಅವರಿಗಿಂತ ಆರು ತಿಂಗಳು ಹಿರಿಯರಾಗಿದ್ದರು. ಎರಡೂ ಮನೆತನದ ಗೌರವ ವಿಶ್ವಾಸದ ಬಾಂಧವ್ಯವನ್ನು ಉಳಿಸುವ ಸಲುವಾಗಿ ಮಾಡಿದ ಮದುವೆಗೆ ವಯಸ್ಸಿನ ಏರುಪೇರು ಅಡ್ಡ ಬರಲಿಲ್ಲ. ಆದರೆ, ಆ ವಯಸ್ಸಿನ ಮದು ಮಕ್ಕಳಿಗೆ ಮದುವೆಯ ಅರ್ಥವೇ ತಿಳಿದಿರಲಿಲ್ಲ. ಮದುವೆ ಎಂದರೇನು? ಸಂಸಾರ ಹೂಡುವುದೆಂದರೇನು? ಎಂಬ ಪರಿಕಲ್ಪನೆಯೂ ಇರಲಿಲ್ಲ. ಅದು ಕೇವಲ ಒಂದು ಆಟವಾಗಿತ್ತು. ಹೊಸ ಬಟ್ಟೆಗಳನ್ನು ಉಡುವ ಸಂಭ್ರಮ. ತಿನ್ನಲು ಬೇಕಾದ ತಿಂಡಿ ತಿನಿಸುಗಳು ಲಭ್ಯವಿತ್ತು. ಆಟಕ್ಕೆ ಒಬ್ಬರಿಗೊಬ್ಬರ ಜೊತೆ ಸಿಕ್ಕಿದ ಹುಮ್ಮಸ್ಸು. ಮನೆಯ ತುಂಬ ನೆಂಟರಿಷ್ಟರು. ಗಾಂಧೀಜಿ ದಂಪತಿಗಳಿಗೆ ಅದು ಅತಿ ಸಂತೋಷದ ವಾತಾವರಣವಾಗಿತ್ತು. ನಂತರದ ದಿನಗಳಲ್ಲಿ ಗಾಂಧೀಜಿ ಅವರಿಗೆ, ತನ್ನ ಹೆಂಡತಿ ವಿದ್ಯಾವಂತಳಲ್ಲ ಎಂಬುದು ಮನವರಿಕೆಯಾಯಿತು. ಆಕೆಗೆ ವಿದ್ಯೆ ಕಲಿಸುವ ಪ್ರಯತ್ನ ಮಾಡಿದರು. ಮನೆಯಲ್ಲಿ ತಾನೇ ಸ್ವತ: ಶಿಕ್ಷಕನಂತೆ ಖುದ್ದಾಗಿ ಶ್ರಮವಹಿಸಿ ಪಾಠ ಹೇಳಿ

ಕೊಡಲು ಪ್ರಾರಂಭ ಮಾಡಿದರು. ಎಳೆ ಪ್ರಾಯದ ಕಸ್ತೂರ್‌ಬಾ ಅವರು ಬಹಳ ಕಷ್ಟಪಟ್ಟು ಗುಜರಾತಿ ಭಾಷೆಯನ್ನು ಕಲಿತರು. ಆದರೆ ತಾನು ಮೊದಲೇ ಕಲಿಯಬೇಕಾಗಿತ್ತು ಎಂಬ ನೋವು ಕಾಡುತ್ತಿತ್ತು. ಮುಂದೆ ಕಲಿಯುವ ಆಸೆ ಬತ್ತಿ ಹೋಯಿತು.

ಗಾಂಧಿ ಅವರು ವಿದ್ಯಾಭ್ಯಾಸವನ್ನು ಮುಂದುವರೆಸಲು 1888ರಲ್ಲಿ ಲಂಡನ್ನಿಗೆ ತೆರಳಿದಾಗ ಕಸ್ತೂರ್‌ಬಾ ಅವರು ತಮ್ಮ ಹಸುಗೂಸು ಹರಿಲಾಲ್ ಗಾಂಧಿಯ ಜೊತೆ ಭಾರತದಲ್ಲೇ ಉಳಿದುಕೊಂಡರು. ಬಾರಿಸ್ಟರ್ ಪದವಿಗಳಿಸಿದ ಮೋಹನ್‌ದಾಸ್ ಅವರು 1891 ರಲ್ಲಿ ಭಾರತಕ್ಕೆ ಮರಳಿ ಬಂದರು. ಪತಿಯ ತಾತ್ಕಾಲಿಕ ಅಗಲಿಕೆಯಿಂದ ಬಳಲಿದ್ದ ಬಾ, ಅವರಿಗೆ ಒಂದು ಕಡೆ ಸಂತೋಷ, ಮತ್ತೊಂದು ಕಡೆ ಆತನ ತಾಯಿ ಮತ್ತು ಹಿರಿಯ ಅತ್ತಿಗೆ ನಿಧನರಾದುದನ್ನು ತಿಳಿದು ನೋಯುವವರೆಂಬ ಸಂಕಟ. ಬಾರಿಸ್ಟರ್ ಗಾಂಧಿ ಅವರಿಗೆ, ಕಸ್ತೂರ್‌ಬಾ ವಿದ್ಯಾವಂತಳಾಗಬೇಕೆಂಬ ಹಂಬಲ ಮತ್ತೆ ಕಾಡತೊಡಗಿತು. ಅವರು ಪಾಶ್ಚಿಮಾತ್ಯ ದೇಶದಲ್ಲಿ ಮಹಿಳೆಯರು ಎಷ್ಟು ಮುಂದುವರೆದಿದ್ದಾರೆ ಎಂಬುದನ್ನು ಹತ್ತಿರದಿಂದ ನೋಡಿದ್ದರು. ಅಂತೆಯೇ ತನ್ನ ಪತ್ನಿಯೂ ಇರಬೇಕೆಂಬ ಬಯಕೆ ಅವರಲ್ಲಿ ಹೆಚ್ಚಾಗಿತ್ತು. 'ಬಾ' ಅವರಿಗೆ ಪುನ: ಪಾಠ ಕಲಿಸಲು ಪ್ರಾರಂಭ ಮಾಡಿದರು. ಈಗ ಆಂಗ್ಲ ಭಾಷೆಯ ಬೋಧನೆಯಾಯಿತು. ದೊಡ್ಡ ಸಂಸಾರದ ಹೊರೆ ಹೊತ್ತ ಬಾ ಅವರಿಗೆ ಪತಿ ಮರಳಿ ಬಂದದ್ದರಿಂದ ಮನಸ್ಸು ಸ್ವಲ್ಪ ಹಗುರವಾದರೆ, ಮತ್ತೊಂದು ಕಷ್ಟ ತಲೆ ಎತ್ತಿತ್ತು. ಅವರಿಗೆ ಆಂಗ್ಲ ಭಾಷೆಯನ್ನು ಕಲಿಯುವ ಆಸಕ್ತಿ ಎಳ್ಳಷ್ಟೂ ಇರಲಿಲ್ಲ.

**ದಕ್ಷಿಣ ಆಫ್ರಿಕಾಗೆ ಪ್ರಯಾಣ**

ಬಾರಿಸ್ಟರ್ ಗಾಂಧಿ 1893 ರಲ್ಲಿ ವಕೀಲಿ ವೃತ್ತಿಗಾಗಿ ದಕ್ಷಿಣ ಆಫ್ರಿಕಾಕ್ಕೆ ಒಬ್ಬರೇ ಪ್ರಯಾಣ ಬೆಳೆಸಿದರು. ಎರಡನೆಯ ಬಾರಿ ಪತ್ನಿ ಮತ್ತು ಪುತ್ರರ ಸಮೇತ ದಕ್ಷಿಣ ಆಫ್ರಿಕಾಗೆ ಪಯಣ ಬೆಳೆಸಿದರು. ಪ್ರಥಮ ಬಾರಿಗೆ ದಕ್ಷಿಣ ಆಫ್ರಿಕಾದಲ್ಲಿ ಜನಪರ ಹೋರಾಟಗಳಲ್ಲಿ ಭಾಗಿಯಾಗಿ ಬಹಳಷ್ಟು ಜನಪ್ರಿಯರಾಗಿದ್ದರು. ಆದ್ದರಿಂದ ಆಫ್ರಿಕಾದಲ್ಲಿ ಪ್ರಸಿದ್ಧರಾಗಿದ್ದ ಪತಿಯೊಡನೆ ಸಣ್ಣ ಮಕ್ಕಳನ್ನು ಕರೆದುಕೊಂಡು ಬಹಳ ಹೆಮ್ಮೆಯಿಂದ ಹೊರಟರು ಕಸ್ತೂರ್‌ಬಾ ಅವರು. ಸಮುದ್ರಯಾನ ಮಾಡುವಾಗ ಎಳುತ್ತಿದ್ದ ಭಯಂಕರ ಬಿರುಗಾಳಿ, ಬೃಹತ್ ಅಲೆಗಳಿಗೆ ಹಡಗು ಸಿಲುಕಿಕೊಂಡಾಗ ಹೆದರಿಕೊಳ್ಳುತ್ತಿದ್ದ ಮಕ್ಕಳಿಗೆ ಪ್ರಾರ್ಥನೆ ಹೇಳಿಕೊಡುವ ಮೂಲಕ ಸಾಂತ್ವನ ಹೇಳುತ್ತಿದ್ದರು. ದಕ್ಷಿಣ ಆಫ್ರಿಕಾದಲ್ಲಿ ಬಿಳಿಯ ಜನಾಂಗದವರು ಮಾಡುತ್ತಿದ್ದ (Apartheid) ವರ್ಣಭೇದದ ಅಪಮಾನವನ್ನು ಸಹಿಸಿಕೊಳ್ಳಬಾರದೆಂದು ಗಾಂಧೀಜಿ ಹೇಳುತ್ತಿದ್ದರು. ಇವರ ಮಾರ್ಗದರ್ಶನ ಬೇಕೆಂದು ಜನ ಕೋರಿಕೊಳ್ಳುತ್ತಿದ್ದರು. ಇದರ ಹಿನ್ನೆಲೆಯಲ್ಲಿ ಗಾಂಧೀಜಿ ಅವರು ಸಂಸಾರ ಸಮೇತರಾಗಿ ಬಂದಾಗ ನೆಟಾಲ್‌ನಲ್ಲಿ ಬಿಳಿಯರು ಅವರ ಹಡಗನ್ನು ಬಿಡದೆ ತಡೆದು ಗಲಾಟೆ ಮಾಡಿದ್ದರು. ಈ ಗಲಾಟೆಯಲ್ಲಿ ಅವರ ಮೈಕೈಯೆಲ್ಲಾ ಗಾಯಗಳಾದವು.

ಏನೂ ತಿಳಿಯದ ಕಸ್ತೂರ್‌ಬಾ ಅವರು ಸಣ್ಣ ಮಕ್ಕಳನ್ನು ಕಟ್ಟಿಕೊಂಡು ಭಾಷೆ ತಿಳಿಯದ ಪರದೇಶಕ್ಕೆ ಬಂದಾಗ, ಪತಿಯ ಪರಿಸ್ಥಿತಿ ಬಗ್ಗೆ ಕಂಗೆಟ್ಟರು. ಗಾಂಧೀಜಿ ಅವರ ಹಿತಚಿಂತಕರಾದ ಕೆಲವರು ಕಸ್ತೂರ್‌ಬಾ ಮತ್ತು ಮಕ್ಕಳನ್ನು ಸುರಕ್ಷಿತವಾಗಿ ರುಸ್ತುಂಜೀ ಅವರ ಮನೆ ಸೇರಿಸಿದರು. ಗಲಾಟೆಯ ನಂತರ ಗಾಂಧೀಜಿ ಅವರು ದುರವಸ್ಥೆಯಲ್ಲಿ ಬಂದದ್ದನ್ನು ಕಂಡು ಕಸ್ತೂರ್‌ಬಾ ನಡುಗಿ ನೀರಾದರು. ದೇವರಲ್ಲಿ ಮೊರೆಯಿಡುವುದೊಂದೇ ಅವರ ಮಾರ್ಗವಾಗಿತ್ತು. ಗಾಂಧೀಜಿ ಅವರು ತಾವು ಪತಿ ಎಂಬ ದರ್ಪವನ್ನು ಕಸ್ತೂರ್‌ಬಾ ಮೇಲೆ ತೋರಿದ್ದುಂಟು. ಆಗಿನ ಕಾಲದಲ್ಲಿ ಶೌಚಾಲಯಗಳು ಸೌಲಭ್ಯಗಳಿಲ್ಲದುದರಿಂದ ಪ್ರತ್ಯೇಕ ಪಾತ್ರೆಯಲ್ಲಿ ಮಲಮೂತ್ರ ಮಾಡಿ ಪಾತ್ರೆಯನ್ನು ತಾವೇ ಶುಚಿ ಮಾಡುವ ಪದ್ಧತಿ ಇತ್ತು. ದಕ್ಷಿಣ ಆಫ್ರಿಕಾದ ಆಶ್ರಮದಲ್ಲಿ ಒಮ್ಮೆ ಅಸ್ಪೃಶ್ಯ ಭಾರತೀಯನೊಬ್ಬನ ಪಾತ್ರೆಯನ್ನು ಗಾಂಧೀಜಿ ಆದೇಶದಂತೆ ಕಸ್ತೂರ್‌ಬಾ ಅವರೇ ಮಾಡಬೇಕಾಗಿ ಬಂತು. ಅವರು ಕಣ್ಣಂಚಿನಲ್ಲಿ ಕಣ್ಣೀರು ತಂದುಕೊಂಡು ಶುಚಿ ಮಾಡಲು ಇಷ್ಟ ಪಡದೇ ಇದ್ದುದಕ್ಕೆ ಗಾಂಧೀಜಿ ಅವರು ಸಿಟ್ಟಿನಿಂದ ಬಾ ಅವರನ್ನು ಮನೆಯಿಂದ ರಟ್ಟೆ ಹಿಡಿದು ಹೊರ ಹಾಕಲನುವಾದರು. ಬಾ ಅವರು ಕಾಡಿ ಬೇಡಿ "ಪರದೇಶದಲ್ಲಿ ನನ್ನನ್ನು ಹೀಗೆ ನಿಲ್ಲಿಸಬಹುದೇ? ಮತ್ತೆ ಹೊರಗಿನ ಜನ ನಮ್ಮ ಸಂಸಾರದ ಬಗ್ಗೆ ಏನೆಂದಾರು?" ಎಂದು ಕಣ್ಣೀರಿಡುತ್ತಾ ಪ್ರಶ್ನಿಸಿದ್ದರು. ಇದರಿಂದಾಗಿ, ಗಾಂಧಿ ಅವರಿಗೆ 'ತಾನು ತಪ್ಪು ಮಾಡಿದೆ' ಅನ್ನಿಸಿತ್ತು. ಮತ್ತು ಒತ್ತಾಯದಿಂದ, ಹಿಂಸೆಯಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಅಹಿಂಸೆಯಿಂದ ಮತ್ತು ಪ್ರೀತಿಯಿಂದ ಮಾತ್ರ ಸಾಧ್ಯವಾಗುವುದು ಎಂದು ಅರಿತರು.

ಆಮೇಲೆ ಗಾಂಧಿ 'ಬಾ' ಅವರನ್ನು ಮನೆಯೊಳಗಿರಲು ಅನುಮತಿ ಕೊಟ್ಟರು. 1905ರ ವೇಳೆಗೆ ಗಾಂಧೀಜಿ ಅವರು ಜೋಹಾನ್ಸ್ ಬರ್ಗ್ ನಗರದಲ್ಲಿ ಪ್ರಸಿದ್ಧ ವಕೀಲರಾಗಿದ್ದರು. ಒಳ್ಳೆಯ ವರಮಾನವೂ ಸಿಗುತ್ತಿತ್ತು. ಬಂಗಲೆಯನ್ನು ಬಾಡಿಗೆಗೆ ತೆಗೆದುಕೊಂಡು ಕೆಲಕಾಲ ಜೀವನ ನಡೆಸಿದರು. ನಂತರದ ದಿನಗಳಲ್ಲಿ ಎಲ್ಲವನ್ನೂ ಬಿಟ್ಟು ಶುದ್ಧ ಪರಿತ್ಯಾಗಿಗಳಾದರು. ಹುಟ್ಟಾರಭ್ಯ ಸಂಪ್ರದಾಯಸ್ಥರ ಮನೆಯಲ್ಲಿ ಬೆಳೆದ ಕಸ್ತೂರ್‌ಬಾ, ಆಚಾರ ವಿಚಾರಗಳನ್ನು ಸಮಯೋಚಿತವಾಗಿ ಅಳವಡಿಸಿಕೊಂಡರು. ಆಂಗ್ಲ ಯುವಕರು ಗಾಂಧೀಜಿ ಅವರೊಡನೆ ವಕೀಲಿ ವೃತ್ತಿ ಮಾಡುತ್ತಿದ್ದರು. ಕಸ್ತೂರ್‌ಬಾ ಅವರೊಡನೆ ಮಾತನಾಡುತ್ತಾ ಇಂಗ್ಲೀಷ್ ಭಾಷೆಯಲ್ಲಿ ಮಾತನಾಡುವುದನ್ನು ಅಲ್ಪಸ್ವಲ್ಪ ಕಲಿತರು. ಅಪಮಾನ, ಅನ್ಯಾಯಕ್ಕೆ ತಲೆ ಬಾಗದ ದಿಟ್ಟ ಮಹಿಳೆಯಾಗಿ ಕಸ್ತೂರ್‌ಬಾ ಬೆಳೆದರು.

**ಹೋರಾಟಕ್ಕೆ ಪ್ರವೇಶ**

1906 ರಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡಲು ನಿರ್ಧರಿಸಿದ ಗಾಂಧೀಜಿ ಗೃಹಕೃತ್ಯದ ಹೊಣೆಗಾರಿಕೆಯನ್ನು ಕಡಿಮೆ ಮಾಡಿಕೊಳ್ಳುತ್ತಾ, ಬ್ರ ಠ ಚಿಚು ರ್ಿವ ರ್ರ ಚೆನ್ನು ಸ್ವೀಕರಿಸಿದರು. ಬಾ ಅವರು ಕಾಯಾ, ವಾಚಾ, ಮನಸಾ ಅವರ ವ್ರತಕ್ಕೆ ನೆರವಾದರು. ತಾವೂ ಸ್ವಾತಂತ್ರ ಸಮರಕ್ಕೆ ಧುಮುಕಿದರು. ಡರ್ಬಾನ್ ನಗರ ಸಮೀಪದ ಫೀನಿಕ್ಸ್‌ನಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದರು. ದಕ್ಷಿಣ ಆಫ್ರಿಕಾದಲ್ಲಿನ ಭಾರತೀಯರು ಇಲ್ಲಿ ಗಾಂಧೀಜಿ ಅವರೊಂದಿಗೆ ವಾಸಿಸತೊಡಗಿದರು. ಗಾಂಧೀಜಿ ಅವರಿಗೆ ಬಿಡುವಿಲ್ಲದ ವೇಳೆಯಲ್ಲಿ ಹಲವು ಬಾರಿ ಕಸ್ತೂರ್‌ಬಾ ಅವರೇ ಜನರೊಂದಿಗೆ, ಕಾರ್ಯಕರ್ತರೊಂದಿಗೆ ಚರ್ಚಿಸುತ್ತಿದ್ದರು. ಗಾಂಧೀಜಿ ಅವರು ಜೈಲಿನಲ್ಲಿರುವಾಗ, ಅವರ ಕೆಲಸ ಕಾರ್ಯಗಳನ್ನು ಮತ್ತು ಹೋರಾಟಗಳನ್ನು ತಾವೇ ಮುಂದುವರೆಸುತ್ತಿದ್ದರು. ಕೊನೆಗೆ ಇವರು

ಸಹ 6 ತಿಂಗಳ ಜೈಲುವಾಸ ಅನುಭವಿಸಿದರು. ಅವರ ಬಿಡುಗಡೆಯ ದಿನ ಗಾಂಧೀಜಿ ಸ್ವತ: ತಾವೇ ಕಾರಾಗೃಹದ ಬಳಿ ಹೋಗಿ, ಸೊರಗಿ ಕ್ಷೀಣಿಸಿ ಬಡಕಲಾದ 'ಬಾ', ಅವರನ್ನು ಮನೆಗೆ ಕರೆದುಕೊಂಡು ಬಂದಿದ್ದರು.

ಮರಳಿ ಭಾರತಕ್ಕೆ ಗಾಂಧೀಜಿ ದಂಪತಿಗಳು ದಕ್ಷಿಣ ಆಫ್ರಿಕಾದಲ್ಲಿ ಸುಮಾರು 21 ವರ್ಷಗಳ ಕಾಲ ಅಲ್ಲಿನ ಭಾರತೀಯರೊಡನೆ ಜೀವನ ನಡೆಸಿ, ಅವರಿಗಾಗಿ ಅಮೂಲ್ಯ ಸೇವೆ ಸಲ್ಲಿಸಿ, ಸೆರೆಮನೆವಾಸ ಅನುಭವಿಸಿ, ಆಶ್ರಮಕಟ್ಟಿ, ಎಲ್ಲರೊಂದಿಗೆ ಸಂಘ ಜೀವಿಗಳಾಗಿದ್ದರು. ಅವರು ಕೊನೆಗೊಂದು ದಿನ ಭಾರತಕ್ಕೆ ಹಿಂತಿರುಗಬೇಕಾಯಿತು. ಅಲ್ಲಿ ಬೀಳ್ಕೊಡುಗೆಯ ಸಮಾರಂಭವನ್ನು ಏರ್ಪಡಿಸಿದ್ದರು. ದಕ್ಷಿಣ ಆಫ್ರಿಕಾದ ಸ್ನೇಹಮಯಿ ಭಾರತೀಯ ಸ್ನೇಹಿತರು ತಮ್ಮ ಪ್ರೀತಿ ವಿಶ್ವಾಸಗಳನ್ನು ವ್ಯಕ್ತಪಡಿಸಲು 'ಬಾ' ಅವರಿಗೆ ಉಡುಗೊರೆಗಳನ್ನು ನೀಡಿದರು. ಚಿನ್ನ, ಬೆಳ್ಳಿ, ವಜ್ರದ ಒಡವೆಗಳನ್ನು ಕಂಡು ನಿರಾಭರಣ ಸುಂದರಿಯಾದ ಬಾರವರಿಗೆ ಒಂದು ಸಣ್ಣ ಆಸೆ ಮೂಡಿತು. ತನಗಾಗಿ ಮತ್ತು ಅಲ್ಪವಾದರೂ, ತನ್ನ ನಾಲ್ಕು ಜನ ಗಂಡುಮಕ್ಕಳ ಮಡದಿಯರಿಗಾಗಿ ಒಡವೆಗಳನ್ನು ಉಳಿಸಿಕೊಳ್ಳುವ ಮನಸ್ಸಾಯಿತು. ಆದರೆ ಗಾಂಧೀಜಿ ಅವರು ಒಪ್ಪಬೇಕಲ್ಲ, ಒಪ್ಪುವಂತಿಲ್ಲ. ಕಸ್ತೂರ್‌ಬಾ ಮರುಮಾತನಾಡದೆ ನಿಶ್ಚಿಲವಾಗಿ ನಿಟ್ಟುಸಿರು ಬಿಟ್ಟರು. ಕಣ್ಣಲ್ಲಿ ನೋಡಿಯೇ ಸಮಾಧಾನಗೊಂಡರು ಮತ್ತೆ ಭಾರತದಲ್ಲಿ ಭಾರತಕ್ಕೆ ಹಿಂತಿರುಗಿದ ನಂತರ 'ಬಾ ದಂಪತಿ'ಗಳು ಕೊಚರಬ್ ಎಂಬಲ್ಲಿ ಆಶ್ರಮ ಸ್ಥಾಪಿಸಿ, ಅಲ್ಲಿಯೇ ವಾಸಿಸತೊಡಗಿದರು. ಅವರ ಎಲ್ಲಾ ಒಡನಾಡಿಗಳು ಅಲ್ಲಿ ವಾಸಿಸುತ್ತಿದ್ದರು. ಬಾ ಅವರ ವೇಷ ಭೂಷಣಗಳು ಬದಲಾದವು. ಬಿಳಿಯ ಖಾದಿ ಸೀರೆ ಹಾಗೂ ಕೈಯಲ್ಲಿ ಎರಡು ಗಾಜಿನ ಬಳೆಗಳು, ಅವರು ಉಡುಪು ತೊಡಪಾಯಿತು.

**ಸಬರಮತಿ ಆಶ್ರಮ**

ಸಬರಮತಿ ನದಿ ದಂಡೆಯ ಮೇಲೆ ವಿಶಾಲವಾದ ಪ್ರದೇಶದಲ್ಲಿ ಆಶ್ರಮ ಸ್ಥಾಪನೆಯಾಯಿತು. ಕೂಡಲೇ ಕೊಚರಬ್‌ನ ಆಶ್ರಮವಾಸಿಗಳೆಲ್ಲ ಸಬರಮತಿ ಆಶ್ರಮದಲ್ಲೂ ನೆಲಸಿದರು. ಎಲ್ಲಾ ಜನಾಂಗದವರೂ ಸಕುಟುಂಬ



ಪರಿವಾರ ಸಮೇತರಾಗಿ ಬಂದು ಆಶ್ರಮದ ಎಲ್ಲಾ ನಿಯಮಗಳಿಗೂ ಬದ್ಧರಾಗಿ, ಸೇವಾ ಮನೋಭಾವ, ಸಾತ್ವಿಕ ಭಾವನೆಗಳಿಂದ 'ವಿಶ್ವಬಂಧುತ್ವ'ವನ್ನು ಬೆಳೆಸಿಕೊಂಡರು. ತಾಯಿ ಬಾ ಅವರು ಆಶ್ರಮದಲ್ಲಿ ಮಮತೆಯ ಸ್ಥಾನವನ್ನು ತುಂಬಿದರು. ಆಶ್ರಮದಲ್ಲಿದ್ದವರಿಗೆಲ್ಲಾ ಖಾದಿ ನೇಯುವುದು ಕಡ್ಡಾಯವಾಗಿತ್ತು. ಮಹಿಳೆಯರ ಸಹಕಾರದಿಂದ ಹಳ್ಳಿಯ ಮಕ್ಕಳಿಗೆ ಅಕ್ಷರ ಜ್ಞಾನ, ಆರೋಗ್ಯ ನಿಯಮ, ಸ್ವಚ್ಛತೆಗಳನ್ನು ಕಲಿಸುತ್ತಿದ್ದರು. ರೈತರ ಸಂಕಷ್ಟಗಳನ್ನು ವಿಚಾರಿಸಲು ಬಾಪು ಮುಂದಾಗುತ್ತಿದ್ದರು. ಹೀಗೆ ಬಾಪು ದಂಪತಿಗಳು ಅನ್ಯರ ಅನುಕೂಲಕ್ಕಾಗಿ ದೇಶದ ಏಳಿಗೆಗಾಗಿ ದುಡಿಯುತ್ತಿದ್ದರು.

1939ರಲ್ಲಿ ರಾಜ್‌ಕೋಟ್‌ನಲ್ಲಿ ಸ್ವಾತಂತ್ರ್ಯ ಹೋರಾಟ ನಡೆಯುತ್ತಿತ್ತು. ಕಸ್ತೂರ್‌ಬಾ ಅವರು ತನ್ನ ತವರೂರಾದ ರಾಜ್‌ಕೋಟ್‌ನಲ್ಲಿ ಸೇವೆ ಮಾಡಬೇಕೆಂದು ಆರೋಗ್ಯ ಸರಿ ಇಲ್ಲದಿದ್ದರೂ, ಹೋಗಿ ಹೋರಾಟದಲ್ಲಿ ಪಾಲ್ಗೊಂಡರು ಮತ್ತು ಸೆರೆಮನೆ ಸೇರಬೇಕಾದ ಪರಿಸ್ಥಿತಿಯು ಬಂದಿತ್ತು.

ಭಾರತ ಬಿಟ್ಟು ತೊಲಗಿರಿ ಚಳುವಳಿ ಬಾ ಅವರು ರಾಜಕೀಯ ರಂಗದಲ್ಲಿ ಕೊನೆಯದಾಗಿ ಪಾಲ್ಗೊಂಡಿದ್ದು 1942ರಲ್ಲಿ. 'ಬ್ರಿಟಿಷರೇ ಭಾರತವನ್ನು ಬಿಟ್ಟು ತೊಲಗಿ' (Quit India Movement) ಎಂಬ ಕರೆ ಬಾಪೂ ಅವರ 'ಹರಿಜನ ಪತ್ರಿಕೆ'ಯಲ್ಲಿನ ಲೇಖನದಿಂದ ಎಲ್ಲೆಡೆಯೂ ಹರಡಿತು. ಕಸ್ತೂರ್‌ಬಾ ಅವರು ಸಂಜೆ ಸಭೆ ನಡೆಸುತ್ತಿದ್ದರು. ಅಲ್ಲಿನ ಚರ್ಚೆಯು ಇದೇ ವಿಷಯವಾಗಿತ್ತು. 'ಹರಿಜನ ಬಂಧು' ಪತ್ರಿಕೆಯಲ್ಲಿ ಪ್ರಕಟವಾದ ಈ ಬರಹವನ್ನು ನೋಡಿದ ಬಾ ಅವರು, ಇದರ ಬಗ್ಗೆ ಮತ್ತು ಇದರ ಪರಿಣಾಮದ ಬಗ್ಗೆ ಚಿಂತಿಸತೊಡಗಿದರು.

"ಈ ವಿಷಯವನ್ನು ಗಮನಿಸಿದ ಬ್ರಿಟಿಷ್ ಸರ್ಕಾರವು ಗಾಂಧೀಜಿ ಅವರನ್ನು ಮತ್ತೆ ಸೆರೆಮನೆಗೆ ಕಳುಹಿಸಬಹುದು ಅಥವಾ 'ಹರಿಜನ ಬಂಧು' ಪತ್ರಿಕೆಯನ್ನು ಬಹಿಷ್ಕಾರ ಹಾಕಿ ನಿಲ್ಲಿಸುವುದು ಖಾತ್ರಿ" ಎಂದು ಅವರಿಗೆ ಅನ್ನಿಸತೊಡಗಿತು. ಕಾಂಗ್ರೆಸ್ ಮಹಾಸಮಿತಿಯಲ್ಲಿ ಭಾಗವಹಿಸಲು ಬೊಂಬಾಯಿಗೆ ಹೊರಡಲು ಬಾಪೂ ಅವರು ಸಿದ್ಧರಾದರು. ಅದನ್ನು ಕಂಡ ಬಾ ಅವರೂ ತಾವೂ ಬರುವುದಾಗಿ ಹಠ ಹಿಡಿದರು. ಹೊರಡುವ ಮುನ್ನ ತಮ್ಮ ಮೊಮ್ಮಗಳಾದ ಮನುಬಹೆನ್‌ಳನ್ನು ಕರೆದು ಒಂದು ಕೆಂಪು ಅಂಚಿನ ಬಿಳಿಯ ಸೀರೆಯನ್ನು ಕೊಟ್ಟು, ಇದು ಬಾಪೂ ಅವರು ತಾವೇ ತೆಗೆದ ನೂಲಿನಿಂದ ನೇಯಿಸಿದ ಸೀರೆಯಾದ್ದರಿಂದ ತಮ್ಮ ಅಂತಿಮ ಕಾಲಕ್ಕೆ ಈ ಸೀರೆಯನ್ನು ಹೊದಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದರು. ಹೊರಡುವ ಸಮಯ ಬಂದಿತು. ಆಶ್ರಮವಾಸಿಗಳು ಅತಿ ಮೌನದಿಂದ ದು:ಖ ತುಂಬಿದ ಭಾರವಾದ ಹೃದಯದಿಂದ ಬಾ ದಂಪತಿಗಳನ್ನು ಬೀಳ್ಕೊಟ್ಟರು.

ತಾವು ಮತ್ತೆ ಆಶ್ರಮಕ್ಕೆ ಹಿಂತಿರುಗುವ ಸಾಧ್ಯತೆ ಇಲ್ಲವೆಂಬುದನ್ನು ತಿಳಿದಿದ್ದ ಬಾಪು ದಂಪತಿಗಳು ಆಶ್ರಮಕ್ಕೆ ಅಂತಿಮ ನಮನಸಲ್ಲಿಸಿದರು. ಬೊಂಬಾಯಿಗೆ ಹೋದ ಮೇಲೆ ಬಾಪು ಅವರು

ದೇಶಾದ್ಯಂತ ಕೊಟ್ಟ ಸಂದೇಶವೆಂದರೆ **"ಮಾಡು ಇಲ್ಲವೇ ಮಡಿ"** ಬೊಂಬಾಯಿಯಲ್ಲಿ ನಡೆದ (ಎ.ಐ.ಸಿ.ಸಿ) ಅಧಿವೇಶನದಲ್ಲಿ ಗಾಂಧೀಜಿ ಅವರು ತಮ್ಮ ಮನದಾಳದ ಅಳಲನ್ನು ತೋಡಿಕೊಂಡರು. ತಮ್ಮ ಚಟುವಟಿಕೆಗಳನ್ನು ಮುಂದುವರಿಸುತ್ತಾ ಶಿವಾಜಿ ಪಾರ್ಕಿನಲ್ಲಿ ಬಹಿರಂಗ ಸಭೆಯನ್ನುದ್ದೇಶಿಸಿ ಮಾತನಾಡುವವರಿದ್ದರು. ಇದನ್ನು ಮುಂಗಡವಾಗಿ ತಿಳಿದ ಬ್ರಿಟಿಷ್ ಸರ್ಕಾರ ಇವರನ್ನು ದಸ್ತಗಿರಿ ಮಾಡಿತು. ಕಸ್ತೂರ್‌ಬಾ ಅವರು ತನ್ನಿಚ್ಛೆಯಂತೆ ಗಾಂಧೀಜಿ ಅವರ ಜೊತೆ ಹೋಗಲು ಅನುಮತಿ ಇತ್ತು. ಆದರೆ ಗಾಂಧೀಜಿ ಅವರಿಗೆ ಅವರ ಕೆಲಸವೇ ಪ್ರಧಾನವಾಗಿತ್ತು. ಅಂತೆಯೇ 'ಬಾ' ಅವರಿಗೆ ತಮ್ಮ ಕಾರ್ಯಕ್ರಮವನ್ನು ಮುನ್ನಡೆಸುವಂತೆ ತಿಳಿಸಿ ಹೊರಟಿದ್ದರು.

**ಸೆರೆಮನೆಗೆ ಕಸ್ತೂರ್‌ಬಾ**

ಕಸ್ತೂರ್‌ಬಾ ಮತ್ತು ಅವರ ವೈದ್ಯರಾದ ಡಾ. ಸುಶೀಲ ಅವರು ಶಿವಾಜಿ ಪಾರ್ಕಿನ ಬಹಿರಂಗ ಸಭೆಗೆ ಬಂದ ಕೂಡಲೇ ಅವರನ್ನು ಬಂಧಿಸಲಾಯಿತು. ಅದಲ್ಲದೆ ದೇಶದ ಅನೇಕ ಮುಖಂಡರನ್ನು ದಸ್ತಗಿರಿ ಮಾಡಿದರು. ಕಸ್ತೂರ್‌ಬಾ ಮತ್ತು ಡಾ. ಸುಶೀಲ ಅವರನ್ನು ಅರ್ಥರ್ ರೋಡ್ ಸೆರೆಮನೆಯಲ್ಲಿಟ್ಟರು. ಬಳಲಿದ್ದ ಶರೀರವನ್ನು ಹೊತ್ತು ನಡೆಯಲು ಕಷ್ಟ ಪಡುತ್ತಿದ್ದ ಕಸ್ತೂರ್‌ಬಾ ಅವರ ಮನಸ್ಸಿನಲ್ಲಿ **"ಇನ್ನು ಜೀವಂತವಾಗಿ ಸೆರೆಮನೆಯಿಂದ ನಾನು ಹೊರಬರಲಾರೆ"** ಎಂಬ ಅರಿವು ಮೂಡಿತ್ತು.

ಕಸ್ತೂರ್‌ಬಾ ಅವರು ದಕ್ಷಿಣ ಆಫ್ರಿಕಾದಲ್ಲಿದ್ದಾಗಲೂ ಅನೇಕ ವೇಳೆ ಅಲ್ಲಿನ ಭಾಷೆಯೂ ತಿಳಿಯದೆ ಕಠೋರವಾದ ಕಾರಾಗೃಹವಾಸ ಮಾಡಿದ್ದರು. ಆದರೆ ಮುಪ್ಪಿನಲ್ಲಿ, ಕಾಯಿಲೆಯಿಂದ ಕುಗ್ಗಿದ ದೇಹ ಮತ್ತು ಸೊರಗಿದ ಮನಸ್ಸಿನಲ್ಲಿ ಸೆರೆಮನೆವಾಸ ಅನುಭವಿಸುವುದು ಕಷ್ಟಕರವಾಗಿತ್ತು. ಅವರ ಅನಾರೋಗ್ಯದ ಕಾರಣದಿಂದ, ಸೆರೆಮನೆ ವಾತಾವರಣದಲ್ಲಿ ಬದುಕುವುದೇ ಕಷ್ಟವಾಗಿತ್ತು. ಆಗಾಖಾನ್ ಸೆರೆಮನೆಯಲ್ಲಿ ನಿಧನ. ಅಂದು ರಾತ್ರಿ ಸೂಪರಿಂಟೆಂಡೆಂಟರು ಕಸ್ತೂರ್‌ಬಾ ಹಾಗೂ ಅವರ ಆತ್ಮೀಯರಾದ ಡಾ. ಸುಶೀಲಾ ಅವರನ್ನು ರೈಲಿನಲ್ಲಿ ಕರೆದುಕೊಂಡು ಹೋದರು. ಅಲ್ಲಿಂದ ಪ್ರಸಿದ್ಧ ಆಗಾಖಾನ್ ಅರಮನೆಗೆ (ಆಗಾಖಾನ್ ಮಹಲ್) ಕರೆದೊಯ್ದರು. ಪ್ರತಿ ಹೆಬ್ಬಾಗಿಲಿಗೂ ಸಶಸ್ತ್ರ ಪಹರೆಯವರು ಕಾವಲು ಕಾಯುತ್ತಿದ್ದರು. ಜನರೇ ಇಲ್ಲದ ಪಾಳುಬಿದ್ದ ಅರಮನೆ. ಹೀಗೆ ಒಳಗೆ ಹೊಕ್ಕು ಅನೇಕ ಕೊಠಡಿಗಳನ್ನು ದಾಟಿಕೊಂಡು ಹೋಗಿ ಕೊನೆಗೆ ಕಟ್ಟಕಡೆಯ ಕೋಣೆಯಲ್ಲಿ ಬಾಪೂ ಅವರನ್ನು ಕಂಡರು. ಆಗಾಖಾನ್ ಅರಮನೆಯನ್ನು ಸೇರಿದರು. ಅವರ ಅಂತ್ಯವೂ ಅಲ್ಲೇ ಆಯಿತು. ಗಾಂಧೀಜಿ ಅವರನ್ನು ಕರೆಸಿಕೊಂಡು ಅವರ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು 22ನೇ ಫೆಬ್ರವರಿ 1944 ರಂದು 75ನೇ ವಯಸ್ಸಿನಲ್ಲಿ ಇಹಲೋಕ ತ್ಯಜಿಸಿದರು. ಪ್ರತಿವರ್ಷ ಫೆಬ್ರವರಿ 22ನೇ ದಿನಾಂಕವನ್ನು ರಾಷ್ಟ್ರಾದ್ಯಂತ **"ಮಾತೃದಿವಸ"** ಎಂದು ಆಚರಿಸಲಾಗುತ್ತಿದೆ. ಮಾನವ ಕೋಟಿಗೇ ಬೇಕಾಗಿದ್ದ ಬಾಪು ಅವರಿಗೆ ಒಂದು ಕ್ಷಣ ಅನಾಥವಾದ ಅನುಭವವಾಗಿತ್ತು.

ಮಾರನೆಯ ದಿನ 'ಬಾ' ಅವರ ಅಂತ್ಯಕ್ರಿಯೆ ಅದೇ ಆಗಾಖಾನ್ ಮಹಲ್‌ನ ಆವರಣದಲ್ಲಿ ನೆರವೇರಿತು. ಇಡೀ ಭಾರತ ದೇಶವೇ ಶೋಕ ಸಾಗರದಲ್ಲಿ ಮುಳುಗಿತು. ಕಸ್ತೂರ್‌ಬಾ ಅವರು ತಮ್ಮ ದಾಂಪತ್ಯ ಜೀವನದ ನೌಕೆಯನ್ನು ಒಡೆಯದಂತೆ ಬಹು ಜಾಗರೂಕತೆಯಿಂದ ತಾಳ್ಮೆಯಿಂದ, ಜಾಣ್ಮೆಯಿಂದ ನಡೆಸಿಕೊಂಡು ಬಂದಿದ್ದರು. ಎಷ್ಟೋ ಸಲ ತನ್ನ ಪತಿ ಮಾಡುತ್ತಿರುವುದು ಸರಿಯಲ್ಲ ಎನಿಸಿದರೂ ಎದುರು ನಿಂತು ವಾದಿಸಿದವರಲ್ಲ, ಹಠ ಮಾಡಿದವರಲ್ಲ, ಹಿಂತಿರುಗಿಸಿ ಜವಾಬು ಕೊಟ್ಟವರಲ್ಲ. ಆದರೆ ತಾಳ್ಮೆಯಿಂದಲೇ ಬುದ್ಧಿ ಕಲಿಸಿದ್ದುಂಟು, ವಿವೇಕವನ್ನು ಬೋಧಿಸಿದ್ದುಂಟು. **"ಬಾ ನನಗೆ ಅಹಿಂಸೆಯ ಗುರು"** ಎಂದು ಸ್ವತ: ಗಾಂಧೀಜಿ ಅವರೇ ಹೇಳಿಕೊಂಡಿದ್ದಾರೆ. ಗಾಂಧೀಜಿ ಅವರ ನಿಸ್ಸಂಕೋಚ ವರ್ತನೆಯಿಂದ, ಕಟು ಮಾತುಗಳಿಂದ ಕಡೆದ ದಿವ್ಯಮೂರ್ತಿಯೇ ಕಸ್ತೂರ್‌ಬಾ. ಆಕೆ ಮಾತೆಯೂ ಹೌದು. ಕಸ್ತೂರಿಯೂ ಹೌದು. ಆದ್ದರಿಂದಲೇ ಆಕೆಯ ವ್ಯಕ್ತಿತ್ವದ ಪರಿಮಳವನ್ನು ಮುಚ್ಚಿಡಲು ಸಾಧ್ಯವಿಲ್ಲ.

**ಆದರ್ಶ ಮಹಿಳೆ**

'ಬಾ' ಸದ್ಗೃಹಿಣಿ. ಕೇವಲ ತನ್ನ ಮಕ್ಕಳಿಗೇ ಅಲ್ಲದೆ ಇಡೀ ಆಶ್ರಮವಾಸಿಗಳಿಗೆ ಮಾತೆಯಾಗಿ, ಪತಿಗೆ ಆದರ್ಶ ಸತಿಯಾಗಿ, ತನ್ನ ಕರ್ತವ್ಯಕ್ಕೆ ಚ್ಯುತಿ ಬರದಂತೆ ನಡೆದುಕೊಂಡರು. ಜೊತೆಗೆ ರಾಜಕೀಯ ರಂಗಕ್ಕೂ ಇಳಿದು ದೇಶ ಸೇವೆ ಮಾಡಿದ ಮಹಾನ್ ಮಹಿಳೆ ಕಸ್ತೂರ್‌ಬಾ.

ಕಸ್ತೂರ್‌ಬಾ ನಿಧನರಾದ ಮೇಲೆ ಆಕೆಯ ಹೆಸರಿನಲ್ಲಿ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ನಿಧಿ ಸಂಗ್ರಹಣೆ ಮಾಡಿ 'ಕಸ್ತೂರ್‌ಬಾ ಗಾಂಧಿ ಪ್ರತಿಷ್ಠಾನ'ವನ್ನು ಪ್ರಾರಂಭಿಸಲಾಯಿತು. ಈ ನಿಧಿ ಸಂಗ್ರಹಣಾ ಕಾರ್ಯದಲ್ಲಿ ಅಮೃತಲಾಲ್ ಥಕ್ಕರ್ ಅವರ ಸೇವೆ ಗಣನೀಯವಾದದ್ದು. ಥಕ್ಕರ್ 'ಬಾಪಾ' ಎಂದೇ ಹೆಸರು ವಾಸಿಯಾಗಿದ್ದರು. ಗಾಂಧೀಜಿ ಅವರು ಇವರನ್ನು 'ಪುಟ್ಟ ಮಹಾತ್ಮ' ಎಂದು ಕರೆಯುತ್ತಿದ್ದುದುಂಟು. ಕಸ್ತೂರ್‌ಬಾ ಗಾಂಧಿ ಸ್ಮಾರಕ ಟ್ರಸ್ಟ್‌ನ ಸ್ಥಾಪನೆ 'ಕಸ್ತೂರ್‌ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್' ಅನ್ನು ರಾಷ್ಟ್ರಮಟ್ಟದಲ್ಲಿ ಸ್ಥಾಪನೆ ಮಾಡಲಾಯಿತು. ಸ್ವತ: ಗಾಂಧೀಜಿ ಅವರೇ ಟ್ರಸ್ಟ್‌ನ ಪ್ರಥಮ ಅಧ್ಯಕ್ಷರಾದರು. ಥಕ್ಕರ್ ಬಾಪಾ ಅವರು ಪ್ರಧಾನ ಕಾರ್ಯದರ್ಶಿಯಾಗಿ, ಸುಚೇತ ಕೃಪಲಾನಿ ಅವರು ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಗಾಂಧೀಜಿ ಅವರ ಸೇವಾಗ್ರಾಮದಲ್ಲೇ ಹಲವು ಕಾಲ ನೆಲಸಿದ್ದ ಎಚ್.ಸಿ. ದಾಸಪ್ಪ ಹಾಗೂ ಯಶೋಧರಾ ದಾಸಪ್ಪ ದಂಪತಿಗಳಿಗೆ ಮತ್ತೆ ಸೇವೆ ಮಾಡುವ ಅವಕಾಶ ದೊರೆಯಿತು.

**ಕರ್ನಾಟಕದಲ್ಲಿ ಕಸ್ತೂರ್‌ಬಾ ಆಶ್ರಮ**

'ಕಸ್ತೂರ್‌ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್' ಮೈಸೂರು ಶಾಖೆಯ ಪ್ರತಿನಿಧಿಯಾಗಿ ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರು ಗಾಂಧೀಜಿ ಅವರಿಂದ ನೇಮಕಗೊಂಡರು. ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳನ್ನು ಕೈಗೊಂಡು, ಕೊನೆಯವರೆಗೂ ಗ್ರಾಮೀಣ ಮಹಿಳೆಯರ, ಮಕ್ಕಳ, ಏಳಿಗೆಗಾಗಿ ಪರಿಶ್ರಮಿಸಿದರು. ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರ ನಿಸ್ವಾರ್ಥ ಸೇವೆಯನ್ನು ನೋಡಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಯಶೋಧರಮ್ಮನವರನ್ನು 'ಕರ್ನಾಟಕದ ಕಸ್ತೂರ್‌ಬಾ' ಎಂದು ಕರೆದಿದ್ದಾರೆ. ಅವರು ಕರ್ನಾಟಕದಲ್ಲಿ 22 ಕೇಂದ್ರಗಳನ್ನು ತೆರೆದರು.

ಯಶೋಧರಮ್ಮ ಅವರು ಕೊನೆಯವರೆಗೆ ಅರಸೀಕೆರೆಯಲ್ಲಿರುವ 'ಕಸ್ತೂರ್‌ಬಾ ಗಾಂಧಿ ಟ್ರಸ್ಟ್'ಗೆ ಸೇವೆ ಸಲ್ಲಿಸಿ ಅಲ್ಲಿಯೇ ಸಮಾಧಿಯಾದರು. ಅವರ ತನು, ಮನ, ಧನವನ್ನು ಕಸ್ತೂರ್‌ಬಾ ಟ್ರಸ್ಟ್ ಮೂಲಕ ಸಾಮಾಜಿಕ ಸೇವೆಗೇ (ಗಾಂಧೀಜಿ ದಂಪತಿಗಳಿಗೆ) ಧಾರೆ ಎರೆದರು.

**– ಪ್ರೊ. ಲೀಲಾ ವಾಸುದೇವ್** ■



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಕಟ್ಟಡ 1965 ರಲ್ಲಿ ಅಂದಿನ ರಾಷ್ಟ್ರಪತಿ ಡಾ. ಎಸ್ ರಾಧಾಕೃಷ್ಣನ್ ಅವರಿಂದ ಉದ್ಘಾಟನೆ..







# Gandhi AT CORPORATE WORLD

Mahatma Gandhi during my studies at Columbia Business School

It was a few years ago. I was at Columbia Business school for the Columbia Senior Executive Program. Columbia Business was the #1 ranked business school in the world ahead of Harvard, Kellogg and other known business schools then for executive education. I guess, it's now too and the top 3 business schools in the world. Columbia Senior Executive Program was one of the top rated international programs for the senior executives holding a minimum position of Senior Vice President in multi-national companies(global companies)to be eligible for the program. In addition, you have to go through couple of qualification tests before you get selected. It was a rigorous program.

We were about 40 in the class, got through these qualifications to be part of this program. It was a class full of diversity. Executives were from different countries/continents and ethnicity. Japan, Pakistan, Thailand, from Asia Germany, UK, Switzerland, from Europe, Australia, South Africa and north America to name a few. The industry they represented were also diverse – Banking, insurance, technology, industrial engineering, food, retail, communication, fabrication, Automotive, Aerospace, pharma… etc and most of these are fortune 100 companies and big brands. Microsoft, Rolls Royce, AT&T, Unilever…etc., and represented by both male and female quite well. I was the LONE Indian.

We had many interesting modules and case studies in the course exposing the participants to the latest and the forward looking management/leadership approaches and methods. One of the important module in that was on leadership. Who is a leader? What defines a leader? Are they born or developed? Why the senior executives have to develop themselves as leaders… etc were the topics in the module.

We had, as I remember a professor from Harvard university teaching this module. In this interactive session, to start, the professor asked all the participants to write down the names two leaders that comes on top of their mind in about a minute. After the 60 seconds, he asked us to read out the names that we had written down. As people started reading down, I was quite surprised and started getting goosebumps as most of the participants said Mahatma Gandhi. Later, the professor

aggregated it and said 32 participants of the 40 had written down Mahatma Gandhi and second was Nelson Mandela. Martin Luther King was the third. I was like most of the Indians was feeling inferior until then and started feeling so proud that I represented the country that the great man is from who the whole world considers as the top leader. It was an awakening.

This not only boosted my confidence but also motivated me to interact with the fellow participants more pro-actively while I became the noticed in the class. The professor himself had a one on one meeting with me after and asked me if I have the copies of the original freedom struggle videos that he could use it teach in the class for authenticity. He was using the Richard Attenburough's Gandhi movie's video clips until then.

Once I was back from the program, I contacted Vishukumar, a friend of long time and an officer in the Government of Karnataka then for the copies of the original video clips of freedom struggle. He directed me to Gandhi…… Koramangala. And I could get the copy of the same and courier to the professor and felt proud that I had my small contribution in spreading awareness about Gandhi and his leadership internationally.

What's surprising to most of my fellow participants was that no participant mentioned any corporate icon as the leader. And further more, the fascinating part is the relevance of Gandhi's leadership even after 50-60 years of his killing and it's appropriateness to Corporate world. To add to that, participants irrespective of the country, ethnicity, industry, language, background consider him as the top leader. For me, it was an eye opener as I never thought people from other countries would know him(except may be South Africa). But, to my own surprise, people all across the globe not only know him but also recognise him as a great leader. I was quite touched by the respect that the world has for Gandhi and the effort they take to spread his life and teachings. It continues to startle me even today after over 3 decades of being in senior leadership roles in multi-national corporation that how a "fakir' from India could influence and impact the world in a way that no one has done before and until now at least… that too in a world today where everything is use and throw or has a very short shelf life in this technologically advanced and connected world. Mahatma Gandhi stands tall in this context going through the test of time. From my experiences, there is no other leader in the world with that standing even today. That's our Mahatma Gandhi to the world from my experience.

**G N Raghavendra**
*Ex- Global Business Head*
*Tech Mahindra*



# ಪದಬಂಧ-02



ಅ.ನಾ.ಪ್ರಹ್ಲಾದರಾವ್

### ಎಡದಿಂದ ಬಲಕ್ಕೆ

2. ಶೋಷಿತ ರೈತರನ್ನು ಒಗ್ಗೂಡಿಸಿ ಗಾಂಧೀಜಿ ಕಾನೂನುಭಂಗ ಚಳವಳಿ ಆರಂಭಿಸಿದ ಬಿಹಾರದ ಸ್ಥಳ (4)

3 ಹಂತಕರ ಗುಂಡಿಗೆ ಗಾಂಧೀಜಿ ಬಲಿಯಾದ ತಿಂಗಳು (4)

7 ಜನರ ಹಿತಕ್ಕಾಗಿ ಕಾರ್ಮಿಕರೇ ಉತ್ಪಾದನೆ ಹಾಗೂ ವಿತರಣೆ ಮಾಡುವ ವ್ಯವಸ್ಥೆ (5)

10 ಸಾಮ ದಾನ ಸೇರಿದಂತೆ ರಾಜನೀತಿಯ ಶಿಕ್ಷೆ ತಿರುಗಿದೆ (2)

12 ಸಹಗಮನ ಪದ್ಧತಿಯಡಿ ಪತಿಯೊಡನೆ ಚಿತೆಗೇರುತ್ತಿದ್ದ ಪತ್ನಿ (2)

13 ಸಮರದಲ್ಲಿ ಗೆದ್ದು ಧರಿಸಿದ ಮಾಲೆ (2)

16 ಗಲಭೆಗಳಾದ ಶತೃಗಳು ಪರಸ್ಪರ ಚುಚ್ಚಿದ ಬಗೆ (2)

18 ರೌಲತ್ ಕಾಯ್ದೆ ವಿರೋಧಿಸಿ ಭಾರತೀಯ ಕಾಂಗ್ರೆಸ್ ಏರ್ಪಡಿಸಿದ 1920ರ ಅಹಿಂಸಾತ್ಮಕ ಆಂದೋಲನ (5)

21 ಗಾಂಧೀಜಿ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ ಹಲವು ಪತ್ರಿಕೆಗಳಲ್ಲಿ ಒಂದು (4)

22 ಹಿಂದ್ ಸ್ವರಾಜ್ ಕೃತಿಯಲ್ಲಿ ಯಾವುದೇ ದೇಶ ಯಂತ್ರಗಳಿಗೆ ಗುಲಾಮರಾಗಬಾರದೆಂದು ಗಾಂಧೀಜಿ ಮಾಡಿದ ಪ್ರತಿಪಾದನೆ (4)

### ಮೇಲಿಂದ ಕೆಳಕ್ಕೆ

1 ಗಾಂಧೀಭವನದ ಮೂಲಕ ಹೆಗ್ಗುರುತು ಮಾಡಿಕೊಂಡಿರುವ ಪಂಜಾಬ್ ರಾಜ್ಯದ ರಾಜಧಾನಿ ನಗರ (4)

2 ಗಾಂಧೀಜಿ ಹೋರಾಟದ ಕರೆಗೆ ಓಗೊಟ್ಟ ಜನರಲ್ಲಿನ ಉತ್ಸಾಹದ ವೇಗ (3)

4 ವಿಶ್ವದಲ್ಲೇ ಅತಿ ದೊಡ್ಡ ಅಣೆಕಟ್ಟೆ ಎಂಬ ಖ್ಯಾತಿಯ ಗುಜರಾತಿನ ಸರ್ದಾರ್ ಸರೋವರಕ್ಕೆ ಹರಿಯುವ ನದಿ (3)

5 ಗಾಂಧಿಜಯಂತಿ ಸಮಯದಲ್ಲಿ ಖಾದಿ ಬಟ್ಟೆಗೆ ಸಿಗುವ ಸೋಡಿ (4)

6 ಗಾಂಧೀಜಿ ಸುಳ್ಳನ್ನು ಹೇಳದೆ ಸದಾ ನುಡಿದ ಸತ್ಯ (2)

8 ಪುತಲೀಬಾಯಿ ಗಾಂಧೀಜಿಯವರ ತಾಯಿ (2)

9 ಆಫ್ರಿಕಾ ನ್ಯಾಯಾಲಯದಲ್ಲಿ ಗಾಂಧೀಜಿ ಮಂಡಿಸಿದ ತರ್ಕ (2)

11 ಭಾರತ ಬಿಟ್ಟು ತೊಲಗಿ ಎಂಬುದು ಸ್ವಾತಂತ್ರ್ಯ ಹೋರಾಟಗಾರರ ಘೋಷಣೆ (3)

12 ಸಬ್‌ಕೋ ದೇ ಭಗವಾನ್ ಎಂದು ಗಾಂಧಿ ಕೋರಿದ ಒಳ್ಳೆಯ ಮನಸು (3)

13 ಹಕ್ಕಿನ ಈಡೇರಿಕೆಗಾಗಿ ಗಾಂಧೀಜಿ ಅನುಸರಿಸಿದ ಶಾಂತಿಯುತ ಹೋರಾಟದ ಮಾರ್ಗ (4)

14 ಸತ್ಯ ಹೇಳಬೇಕು ಎಂಬ ಆಶಯದ ಜೊತೆ ಗಾಂಧೀಜಿ ವಿರೋಧಿಸಿದ ಕಪಟತನ (2)

15 ಗಾಂಧೀಜಿ ತಂದೆ ಕರಮಚಂದರನ್ನು ಕರೆಯಲಾಗುತ್ತಿದ್ದ ಹೆಸರು ತಿರುಗಿದೆ (2)

17 ಸ್ವಾತಂತ್ರ್ಯ ಬಂದ ಕೂಡಲೇ ದೇಶ ಎರಡಾಗಿ ಬೇರ್ಪಟ್ಟ ಬಗೆ (4)

18 ಲಕ್ಷ್ಮೀದಾಸ್ ಗಾಂಧೀಜಿ ಅವರ ಸಹೋದರ (3)

19 1948ರಲ್ಲಿ ನಡೆಯಿತು ಗಾಂಧೀಜಿಯವರ ಸಂಹಾರ (2)

20 ಗಾಂಧೀಜಿ ಹೇಳಿದಂತೆ ರಾಮನ ಹಾಗೆಯೇ ಈ ಪರಮತ ದೇವರು (3)

**ಪದಬಂಧ–2 ರ ಉತ್ತರ ಮುಂದಿನ ಸಂಚಿಕೆಯಲ್ಲಿ.**

### ಉತ್ತರ : ಪದಬಂಧ – 1



**ಬಲಿಷ್ಠತೆ ಎನ್ನುವುದು ನಿಮ್ಮ ದೈಹಿಕ ಸಾಮರ್ಥ್ಯದಿಂದ ಬರುವಂಥದಲ್ಲ; ಅದು ಅದಮ್ಯ ಅಂತಃಶಕ್ತಿಯಿಂದ ಬರುವಂಥದ್ದು.**

